# ಅಚಲ

ತಿಂಗಳ ಪತ್ರಿಕೆ

ಆಗಸ್ಟ್ - 2003

16

## ಒಳಗೇನಿದೆ







ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 18 ಸಂಚಿಕೆ : 8

ಸಂಪಾದಕ ಮಂಡಲಿ

ಎನ್. ಗಾಯತ್ರಿ

ನೇಮಿಚಂದ್ರ, ದೇವಿ,

ಶಾಂತಾನಾಗರಾಜ್

ಹೆಚ್. ಎಸ್: ಗೀತಾ

ಹೇಮಲತಾ ಮಹಿಷಿ

ಪ್ರಕಾಶಕರು

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ

ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


Achala - Edited by Dr. N. Gayathri

Published by Dr. G. Ramakrishna on behalf of Jagruthi Mahila Adhyayana Kendra

Printed at Lipi Mudrana Bangalore - 560 004


ಆತ್ಮೀಯರೆ,

ಕಳೆದ 18 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.

ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.

## ಅಚಲದ ಚಂದಾ ವಿವರಗಳು ಹೀಗಿವೆ

ವಾರ್ಷಿಕ ಚಂದಾ - ರೂ. 40/- (ವ್ಯಕ್ತಿಗಳಿಗೆ)

ರೂ. 75/- (ಸಂಸ್ಥೆಗಳಿಗೆ)

ಅಜೀವ ಚಂದಾ - ರೂ. 300/- (ವ್ಯಕ್ತಿಗಳಿಗೆ)

ರೂ. 400/- (ಸಂಸ್ಥೆಗಳಿಗೆ)


**ಅಚಲ ವಿಳಾಸ**

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ,
ಬನಶಂಕರಿ 3ನೇ ಹಂತ, ಬೆಂಗಳೂರು - 560 085

## ಸಂಪಾದಕೀಯ

# ಮಹಿಳಾ ಸಮಾನತೆಗಾಗಿ ಸಮಾನ ಸಿವಿಲ್ ಸಂಹಿತೆ

ಸಮಾನ ಸಿವಿಲ್ ಸಂಹಿತೆಯನ್ನುವುದು ಲಿಂಗನ್ಯಾಯಕ್ಕೆ, ಲಿಂಗ ಸಮಾನತೆಗೆ ಸಂಬಂಧಿಸಿದ ವಿಷಯವಾಗಿದೆ. ಸ್ವತಂತ್ರ ಭಾರತದಲ್ಲಿ ಸಮಾನ ಸಿವಿಲ್ ಸಂಹಿತೆಯ ಅಪೇಕ್ಷೆಯು ಮತ್ತೆ ಮತ್ತೆ ಪ್ರಸ್ತಾಪವಾಗುತ್ತಿದ್ದರೂ ಆ ದಿಕ್ಕಿನಲ್ಲಿ ಪ್ರಯತ್ನಗಳೇನೂ ಪರಿಣಾಮಕಾರಿಯಾಗಿ ಆಗಿಲ್ಲ. ಇತ್ತೀಚೆಗೆ ಸುಪ್ರೀಂಕೋರ್ಟಿನ ಮುಖ್ಯ ನ್ಯಾಯಮೂರ್ತಿ ವಿ.ಎನ್. ಖರೆ ನೇತೃತ್ವದ ವಿಭಾಗೀಯ ಪೀಠವು ಭಾರತೀಯ ಉತ್ತರಾಧಿತ್ವ ಕಾಯಿದೆಗೆ ಸಂಬಂಧಪಟ್ಟಂತೆ ತೀರ್ಪು ಕೊಡುವಾಗ ನಾಗರಿಕ ಸಮಾಜದಲ್ಲಿ ಧಾರ್ಮಿಕ ಮತ್ತು ವೈಯಕ್ತಿಕ ಕಾನೂನುಗಳ ನಡುವೆ ಯಾವುದೇ ಸಂಬಂಧವಿಲ್ಲ ಎಂದು ತಿಳಿಸುತ್ತಾ ಎಲ್ಲ ಧಾರ್ಮಿಕ ಸಮುದಾಯಗಳಿಗೆ ಅನ್ವಯಿಸುವ ಏಕರೂಪ ನಾಗರಿಕ ಸಂಹಿತೆಗೆ ತನ್ನ ಬಲವನ್ನು ವ್ಯಕ್ತಪಡಿಸಿದೆ. ಅಷ್ಟೇ ಅಲ್ಲ, ಇಂತಹ ಸಂಹಿತೆ ರಾಷ್ಟ್ರೀಯ ಐಕ್ಯತೆ ಮೂಡಿಸಲು ಅಗತ್ಯವಾಗಿದೆ ಎಂದು ತಿಳಿಸಿದೆ.

ಸುಪ್ರೀಂಕೋರ್ಟಿನ ಈ ಸೂಚನೆಗೆ ವಿವಿಧ ರಾಜಕೀಯ ಪಕ್ಷಗಳು ಭಿನ್ನ ರೀತಿಯಲ್ಲಿ ಪ್ರತಿಕ್ರಿಯಿಸಿವೆ. ಈ ಪ್ರತಿಕ್ರಿಯೆಗಳು ಯಾವುದೂ ಹೊಸದಲ್ಲ. ಹಾಗೆಯೇ ಯಾವ ವಿಶೇಷ ತಾರ್ಕಿಕ ವಿವೇಚನೆಯೂ ಇದರಲ್ಲಿಲ್ಲ. ಏಕರೂಪ ನಾಗರಿಕ ಸಂಹಿತೆಯನ್ನು ಜಾರಿಗೆ ತರುವುದರಿಂದ ರಾಷ್ಟ್ರೀಯ ಐಕ್ಯತೆ ಸಾಧ್ಯ ಎಂದು 'ಭ್ರಮಿಸಿರುವ' ಸುಪ್ರೀಂಕೋರ್ಟಿನ ನಿಲುವನ್ನು ಸ್ವಾಗತಿಸಿರುವ ಬಿಜೆಪಿಯು ಇಡೀ ದೇಶವನ್ನು 'ಹಿಂದೂ ರಾಷ್ಟ್ರ' ಮಾಡಿಬಿಡಬಹುದೆಂಬ ಕನಸಿನಲ್ಲಿ ಆನಂದದಿಂದ ಕುಣಿಯುತ್ತಿದೆ. ಹಾಗೆಯೇ ಕಾಂಗ್ರೆಸ್ ಮತ್ತು ಇತರ ಪಕ್ಷಗಳು ಇಂತಹ ನಾಗರಿಕ ಸಂಹಿತೆ ಅಲ್ಪಸಂಖ್ಯಾತರ ಹಿತಕ್ಕೆ ವಿರುದ್ಧವಾದುದು ಎಂಬ ಆತಂಕ ವ್ಯಕ್ತಪಡಿಸಿವೆ.

ಆರೇಳು ವರ್ಷಗಳ ಹಿಂದೆ ವಿರಡನೆ ಮದುವೆಯಾಗಲೆಂದೇ ಮುಸ್ಲಿಂ ಧರ್ಮಕ್ಕೆ ಮತಾಂತರಗೊಳ್ಳುವ ಗಂಡಂದಿರ ವರ್ತನೆಯನ್ನು ಟೀಕಿಸಿ ತೀರ್ಪು ನೀಡುವಾಗ ಸುಪ್ರೀಂಕೋರ್ಟು ಅಂದಿನ ಕೇಂದ್ರ ಸರ್ಕಾರದ ಕಾನೂನು ಇಲಾಖೆಯನ್ನು ತರಾಟೆಗೆ ತೆಗೆದುಕೊಂಡಿತ್ತು. ನಮ್ಮ ದೇಶದ ಸಂವಿಧಾನದಲ್ಲಿ ಪರಿಚ್ಛೇದ 44ರ ಸಮಾನ ನಾಗರಿಕ ಸಂಹಿತೆ ಇರಬೇಕೆಂಬ ಆಶಯಕ್ಕೆ ತಕ್ಕಂತೆ ಸಂಹಿತೆಯನ್ನು ರೂಪಿಸಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ ಎಂದು ಪ್ರಶ್ನಿಸಿತ್ತು. ಅಂದಿನಿಂದ ಇಂದಿನವರೆಗೂ ಸರ್ಕಾರವಾಗಲೀ, ರಾಜಕೀಯ ಪಕ್ಷಗಳಾಗಲೀ, ಸಾಮಾಜಿಕ ಸಂಘಟನೆಗಳಾಗಲೀ ಈ ದಿಕ್ಕಿನತ್ತ ಅಂತಹ ವಿಶೇಷ ಪ್ರಯತ್ನವನ್ನೇನು ಮಾಡಿಲ್ಲ.

ಈ ಸಂದರ್ಭದಲ್ಲಿ ನಮ್ಮ ಮುಂದಿರುವ ಪ್ರಶ್ನೆ - ಇಂತಹ ಪರಿಸ್ಥಿತಿಗೆ ಕಾರಣ ಏನು? ಮತ್ತು ಇಷ್ಟೊಂದು ಚರ್ಚೆಯಾಗುತ್ತಿರುವ 'ಏಕರೂಪ ನಾಗರಿಕ ಸಂಹಿತೆ'ಯ ಕರಡು ನಮ್ಮ ಮುಂದಿದೆಯೇ? 'ಸಮಾನ ಸಿವಿಲ್ ಸಂಹಿತೆ'ಯ ಕರಡು ಮಸೂದೆಯನ್ನು ಮಾಡಿಕೊಳ್ಳುವ ಮುನ್ನವೇ ಅದನ್ನು ವಿರೋಧಿಸುವ ಸನ್ನಾಹಗಳು ಕಾಣಿಸುತ್ತಿವೆ. ಸಮಾನ ಸಿವಿಲ್ ಸಂಹಿತೆಯ ಹೆಸರಿನಲ್ಲಿ ಒಂದು ಧರ್ಮದ ಭಾವನೆಗಳನ್ನು ಇತರರ ಮೇಲೆ ಹೊರಿಸುವ ಯತ್ನ ಮಾಡಲಾಗುತ್ತಿದೆ, ಎಂಬ ಆರೋಪವಿದೆ. ಈ ಸಂಹಿತೆಯಲ್ಲಿ ಯಾವ ಅಂಶಗಳು ಒಳಗೊಳ್ಳಬೇಕು, ಅಥವಾ ಈಗಿರುವ ನಿಯಮಗಳಿಂದ ಯಾವ್ಯಾವ ಅಂಶಗಳನ್ನು ಬಿಡಬೇಕು ಎಂಬುದರ ವಿಸ್ತೃತ ಚರ್ಚೆಯಾಗಿ ಕರಡು ಮಸೂದೆ ಸಿದ್ಧವಾಗಬೇಕು. ಸರ್ವ ಧರ್ಮೀಯರೂ ಒಪ್ಪುವಂತಹ ಕರಡು ಸಿದ್ಧಮಾಡಬೇಕು. ಈ ಪ್ರಕ್ರಿಯೆ ಪ್ರಜಾಸತ್ತಾತ್ಮಕವಾಗಿ ಹೇಗೆ ನಡೆಯಬೇಕು ಎಂಬುದರ ಚರ್ಚೆಯೇ ನಡೆಯದೆ 'ಸಮಾನ ನಾಗರಿಕ ಸಂಹಿತೆ'ಯ ಪ್ರಸ್ತಾಪ ಬಂದಾಗಲೆಲ್ಲ ಒಂದು ಗುಂಪು ಕಿವಿ ಮುಚ್ಚಿ ಅದನ್ನು ವಿರೋಧಿಸುವುದು, ಮತ್ತೊಂದು ಗುಂಪು ಕೇಕೆ ಹಾಕಿ ಸ್ವಾಗತಿಸುವುದು ಹಲವಾರು ವರ್ಷಗಳಿಂದ ನಡೆದೇ ಇದೆ ಮತ್ತು ಇದರಿಂದಾಗಿ 'ಸೆಕ್ಯುಲರ್ ಭಾರತ'ದ ಹೆಸರನ್ನು ಅಣಕಿಸುವಂತಾಗಿದೆ.

ಕಳೆದ ಎರಡು ದಶಕಗಳಲ್ಲಿ ಸುಪ್ರೀಂಕೋರ್ಟ್ ತನ್ನ ಹಲವಾರು ತೀರ್ಪುಗಳಲ್ಲಿ ಮತೀಯ ಕಾನೂನಿನ ಆಶಯಗಳನ್ನು ಮೀರಿ ಪ್ರಗತಿಪರವಾದ ತೀರ್ಪುಗಳನ್ನು ನೀಡಿದೆ. ಶಾಬಾನೋ ಪ್ರಕರಣದಿಂದ ಹಿಡಿದು ಬಹುಪತ್ನಿತ್ವಕ್ಕೆ ಸಂಬಂಧಪಟ್ಟಂತೆ. ವಿಚ್ಛೇದಿತ ಪತ್ನಿಗೆ ಜೀವನ ನಿರ್ವಹಣೆ ಒದಗಿಸುವ ಮತ್ತು ಹೆಣ್ಣು ಮಕ್ಕಳಿಗೆ ಆಸ್ತಿಕೊಡಬೇಕೆನ್ನುವ ಹಲವಾರು ಪ್ರಕರಣಗಳಲ್ಲಿ ಹೆಣ್ಣು ಯಾವ ಧರ್ಮಕ್ಕೆ ಸೇರಲಿ, ಅವಳಿಗೆ ಮತೀಯ ಕಾನೂನಿನಾಚೆ ನ್ಯಾಯದೊರಕಿಸುವ ಪ್ರಯತ್ನಮಾಡಿದೆ, ಹಾಗೆಂದ ಮಾತ್ರಕ್ಕೆ ಎಲ್ಲ

ಸಂದರ್ಭದಲ್ಲಿಯೂ ನ್ಯಾಯಾಲಯಗಳು ಲಿಂಗನ್ಯಾಯದ, ಸೆಕ್ಯುಲರ್ ಆದ ತೀರ್ಪುಗಳನ್ನು ಕೊಟ್ಟು ಜನರ ವಿಶ್ವಾಸವನ್ನು ಗಳಿಸಿದೆಯೆಂದು ಹೇಳಲಾಗುವುದಿಲ್ಲ. ಭಾಂವ್ರಿದೇವಿ ಪ್ರಕರಣದಲ್ಲಿ ನ್ಯಾಯಾಲಯ ಜಾತಿಧರ್ಮಕ್ಕೆ ಅನ್ವಯಿಸುವಂತೆ ಹೇಳಿರುವ ಮಾತುಗಳಾಗಲೀ ಮತ್ತು ಇತ್ತೀಚೆಗೆ ಗುಜರಾತ್ ಗಲಭೆಗೆ ಸಂಬಂಧಪಟ್ಟಂತೆ ಪ್ರಕಟವಾಗುತ್ತಿರುವ ತೀರ್ಪುಗಳು ಜನರಲ್ಲಿ ಅಸಮಧಾನವನ್ನು ಹೆಚ್ಚಿಸುತ್ತಲೇ ಇರುತ್ತವೆ. ಆದ್ದರಿಂದ 'ಸಮಾನ ನಾಗರಿಕ ಸಂಹಿತೆ'ಯನ್ನು ತರುವ ಪ್ರಯತ್ನಗಳಲ್ಲಿ ನಾವು ನ್ಯಾಯಾಲಯಗಳ ಪ್ರಯತ್ನವನ್ನು ನೆಚ್ಚಿಕೊಳ್ಳುವುದಕ್ಕಿಂತ ಜನಸಾಮಾನ್ಯರ ನಡುವಿನ ಜಾಗೃತಿಯ ಚಳುವಳಿಯನ್ನೇ ಅವಲಂಬಿಸಬೇಕು.

1956ರಲ್ಲಿ ಹಿಂದೂ ಕಾಯಿದೆಯು ಜಾರಿಗೆ ಬರುವುದಕ್ಕೆ ಮುಂಚಿನಿಂದಲೂ ಆರಂಭದ ಮಹಿಳಾ ಹೋರಾಟಗಾರರು ಏಕರೂಪ ಸಿವಿಲ್ ಸಂಹಿತೆಗಾಗಿ ಒತ್ತಾಯಿಸಿ ಹೋರಾಟ ನಡೆಸಿದ್ದಾರೆ, ಎಂಬ ಅಂಶವನ್ನು ಮರೆಯಲಾಗದು. ರೇಣುಚಕ್ರವರ್ತಿಯಂತಹ ಮಹಾನ್ ನಾಯಕಿಯರೂ ಇಂತಹ ಹೋರಾಟದ ನೇತೃತ್ವವನ್ನು ವಹಿಸಿದ್ದರು. ಇಂತಹ ಏಕರೂಪ ಸಿವಿಲ್ ಸಂಹಿತೆಯ ಆಶಯವು ಎಲ್ಲ ಧರ್ಮದ ದಮನಕಾರಿ ಅಂಶಗಳನ್ನು ನಿವಾರಿಸಿ ಜನಸಾಮಾನ್ಯರಿಗೆ ನ್ಯಾಯ ದೊರಕಿಸುವುದೇ ಉದ್ದೇಶವಾಗಿರಬೇಕು.

ಇತ್ತೀಚಿನ ವರ್ಷಗಳಲ್ಲಿ ಹಿಂದೂ ಕೋಮುವಾದಿಗಳು ಗುಜರಾತ್, ಅಯೋಧ್ಯಾ, ಭಾಗಲ್ಪುರಗಳಲ್ಲಿ ನಡೆಸಿದ ದಾಂಧಲೆ, ಅಲ್ಪಸಂಖ್ಯಾತರನ್ನೇ ಗುರಿಯಾಗಿಟ್ಟುಕೊಂಡು ನಡೆಸಿದ ಕೋಮುಗಲಭೆಗಳು ಮತ್ತು ಅವುಗಳನ್ನು ಸಮರ್ಥಿಸಿಕೊಳ್ಳುವ ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ನೀತಿಯಿಂದ ಬೆಚ್ಚಿಬಿದ್ದು ಸಮಾನ ನಾಗರಿಕ ಸಂಹಿತೆಯೆಂದರೆ ಬಹುಸಂಖ್ಯಾತರ ಧಾರ್ಮಿಕ ಕಾನೂನನ್ನು ಎಲ್ಲರಿಗೂ ವಿಸ್ತರಿಸಬೇಕೆಂಬ ಆಗ್ರಹದ ಹುನ್ನಾರವೆಂದು ಜನರು ಆತಂಕ ಪಟ್ಟಿರುವುದರಲ್ಲಿ ಹುರುಳಿಲ್ಲದೆ ಇಲ್ಲ . ಆದರೂ ಕೋಮುವಾದಿಗಳು ಇಂತಹ ಕುತಂತ್ರವನ್ನು ಮಾಡದಿರುವಂತೆ ಪ್ರತಿಚಳುವಳಿಯನ್ನು ರೂಪಿಸುವ ಜವಾಬ್ದಾರಿಯನ್ನು ಪ್ರಗತಿಪರರು ನಿರ್ವಹಿಸಬೇಕಾಗಿದೆ. ಸಮಾನ ಸಂಹಿತೆಯೆನ್ನುವುದು ತತ್‌ಕ್ಷಣದಲ್ಲಿ ಆಗುವ ಕಾರ್ಯವಲ್ಲ, ಅದಕ್ಕೆ ಹಲವು ವರ್ಷಗಳೇ ಬೇಕಾಗಬಹುದು. ಎಲ್ಲ ಧರ್ಮದ ಪ್ರತಿನಿಧಿಗಳ ವಿಶ್ವಾಸದಿಂದ, ಭಾಗವಹಿಸುವಿಕೆಯಿಂದ ಇಂತಹ ಕರಡು ಮಸೂದೆ ಸಿದ್ಧವಾಗಬೇಕು.

ಸಮಾನ ಸಿವಿಲ್ ಸಂಹಿತೆಗಿರುವ ಮತ್ತೊಂದು ವಿರೋಧವೆಂದರೆ ಇಂತಹ ಸಂಹಿತೆಯಿಂದ ದೇಶದ ಬಹುಮುಖಿ ಸಂಸ್ಕೃತಿಯ ಮೇಲೆ ದಾಳಿ ಮಾಡಿದಂತಾಗುತ್ತದೆ, ಎಂದಾಗಿದೆ. ಆದರೆ ಯಾವುದೇ ಸಂಸ್ಕೃತಿಯ ಒಡಲಲ್ಲಿ ಶೋಷಕ ಅಂಶಗಳಿದ್ದರೆ ಅದನ್ನು ನಿವಾರಿಸಬೇಕಾದದ್ದು ಎಲ್ಲ ಪ್ರಗತಿಪರರ ಆದ್ಯ ಕರ್ತವ್ಯ. ಎಲ್ಲ ಧರ್ಮಗಳಲ್ಲೂ ಹೆಣ್ಣನ್ನು ಶೋಷಿಸುವ ಅಂಶಗಳಿವೆಯೆಂಬುದು ಅಪ್ರಿಯವಾದರೂ ಕಹಿಸತ್ಯವೇ. ಹಾಗಿರುವಾಗ ಸಂಸ್ಕೃತಿಯ ವೈವಿಧ್ಯತೆಯನ್ನು ಉಳಿಸಿಕೊಳ್ಳುತ್ತೇವೆಂದು ಮತೀಯ ಕಾನೂನುಗಳಲ್ಲಿನ ಶೋಷಣೆಯ ಅಂಶಗಳನ್ನು ಉಳಿಸಿಕೊಳ್ಳಲು ಸಾಧ್ಯವೇ? ಇನ್ನು ಕೆಲವರು ಒಂದು ಧರ್ಮದೊಳಗಿನ ಸ್ತ್ರೀ-ಪುರುಷ ಸಮಾನತೆ ಸಾಧಿಸಿದ ನಂತರ ಸಮಾನ ಸಿವಿಲ್ ಸಂಹಿತೆಗಾಗಿ ಹೋರಾಟ ನಡೆಸುವುದು ಸೂಕ್ತ. ಈಗ ಇನ್ನು ಕಾಲ ಪಕ್ವವಾಗಿಲ್ಲ, ಎಂಬಂತಹ ಅಭಿಪ್ರಾಯಗಳನ್ನು ವ್ಯಕ್ತಪಡಿಸುವುದುಂಟು. ಇಂತಹ ಸಂಹಿತೆಗೆ ಒತ್ತಾಯ ಆಯಾಯ ಧರ್ಮದ ಜನರಿಂದಲೇ ಬರಬೇಕೇ ಹೊರತು ಒತ್ತಾಯ ಹೇರುವುದು ತರವಲ್ಲ. ಈ ಎಲ್ಲ ನೆಪಗಳು ಸಮಾನ ಸಂಹಿತೆಯ ಬಗೆಗೆ ಕಳಕಳಿಯನ್ನು ತೋರಿಸುವುದಿಲ್ಲ ಮತ್ತು ಈ ನೆಪಗಳು ಇಂತಹ ಸಂಹಿತೆಯ ಸಾಧ್ಯತೆಯನ್ನು ದೂರದೂರಕ್ಕೆ ತಳ್ಳುವುದೇ ಹೊರತು ವಿವೇಚನೆಯ ಕಾರ್ಯವೆನಿಸಿಕೊಳ್ಳುವುದಿಲ್ಲ.

ಸಮಾನ ಸಿವಿಲ್ ಸಂಹಿತೆಯನ್ನು ಕೋಮುವಾದಿಗಳು ಯಾವ ಕಾರಣಕ್ಕೆ ಒತ್ತಾಯಿಸಲಿ ಅವರ ವಾದವನ್ನು ನಾವು ಪುಷ್ಟೀಕರಿಸಬೇಕಾಗಿಲ್ಲ. ಹಾಗೆಯೇ ಅವರ ಕಲ್ಪನೆಯ 'ಸಮಾನ ಸಿವಿಲ್ ಸಂಹಿತೆ'ಯನ್ನು ಅಂಗೀಕರಿಸಲೂ ಬೇಕಿಲ್ಲ. ಆದರೆ ಸೆಕ್ಯುಲರ್ ಭಾರತಕ್ಕೆ ಸಮಾನ ಸಿವಿಲ್ ಸಂಹಿತೆಯು ಅಗತ್ಯವಾಗಿ ಬೇಕಿದೆ. ಆದರಲ್ಲೂ ವಿಶೇಷವಾಗಿ ಮಹಿಳೆಯರಿಗೆ ಬೇಕಾಗಿದೆ. ಈ ಸಂಹಿತೆಯ ಜಾರಿಯಷ್ಟರಿಂದಲೇ ರಾಷ್ಟ್ರೀಯ ಐಕ್ಯತೆ ಸಾಧ್ಯವಾಗಿ ಬಿಡುತ್ತದೆಯೆಂಬುದು ಒಂದು ಭ್ರಮೆಯಷ್ಟೆ. ಎಲ್ಲ ಧರ್ಮದ ವಿಚಾರವಂತರು ಒಟ್ಟುಗೂಡಿ ಎಲ್ಲರಿಗೂ ಸಮ್ಮತವಾಗಬಹುದಾದಂತಹ ಸಮಾನ ಸಿವಿಲ್ ಸಂಹಿತೆಗಾಗಿ ಹೋರಾಟ ನಡೆಸಬೇಕು. ಇದೊಂದು ದೀರ್ಘ ಪ್ರಕ್ರಿಯೆಯೇ ಆದರೂ ಅದಕ್ಕೆ ಸಮಗ್ರವಾದ, ಸಶಕ್ತ ಹೋರಾಟದ ಅಗತ್ಯವಿದೆ.

- ಎನ್. ಗಾಯತ್ರಿ

# ಔಷಧ ರಂಗದಲ್ಲಿ ಕ್ರಾಂತಿ ತಂದ ನೊಬೆಲ್ ಪ್ರಶಸ್ತಿ ವಿಜೇತ ವಿಜ್ಞಾನಿ - ಗರಟ್ರೂಡ್ ಬಿ. ಇಲಿಯನ್

- ನೇಮಿಚಂದ್ರ

ಇಪ್ಪತ್ತನೇ ಶತಮಾನದ ಔಷಧ ತಯಾರಿಕಾ ರಂಗದಲ್ಲಿ ತಂದ ವಿಜ್ಞಾನಿ ಗರಟ್ರೂಡ್ ಇಲಿಯನ್. ಎಂಟು ದಶಕಗಳ ಸಾರ್ಥಕ ಬದುಕನ್ನು ಮುಗಿಸಿ, ಶತಮಾನದಂಚಿನಲಿ ತೀರಿಕೊಂಡ ಈ ವಿಜ್ಞಾನಿಯ ಸಾಧನೆಗಳು ಅಗಾಧ. ಕ್ಯಾನ್ಸರಗೆ ಬಲಿಯಾದ ಆಪ್ತರ ಸಾವಿನಿಂದ ಚಿಕ್ಕ ಮಕ್ಕಳಲ್ಲಿ ಕಾಣಿಸಿಕೊಳ್ಳುವ ಪ್ರಾಣಾಪಾಯದ ರೋಗ, ರಕ್ತದ ಕ್ಯಾನ್ಸರಗೆ ಚಿಕಿತ್ಸೆ ಕಂಡು ಹಿಡಿದಾಕೆ. ದೇಹದ ಅಂಗಗಳ ಕಸಿಯನ್ನು, ಸಾಧ್ಯವಾಗಿಸಿದಾಕೆ. ಸಂಧಿವಾತ. ಹರ್ಪಿಸ್, ಮಲೇರಿಯಾ, ಮೂತ್ರ ಮತ್ತು ಶ್ವಾಸಕೋಶಗಳಿಗೆ ಸಂಬಂಧಿಸಿದ ಸೋಂಕು ರೋಗಗಳಿಗೆ ಹೊಸ ಚಿಕಿತ್ಸಾ ವಿಧಾನಗಳ ಬಾಗಿಲು ತೆರೆದಾಕೆ. ಮೊಟ್ಟ ಮೊದಲ ವೈರಸ್ ವಿರೋಧಿ ಔಷಧವನ್ನು ಕಂಡು ಹಿಡಿದ ಈಕೆಯ ಸಂಶೋಧನೆಗಳು ಮುಂದುವರೆದು. ಏಡ್ಸ್ ರೋಗದ ಮೊಟ್ಟಮೊದಲ ಔಷಧವಾದ 'ಎ.ಸೆಡ್.ಟಿ' ತಯಾರಿಸಲು ಕಾರಣವಾಯಿತು.

ಔಷದ ಸಂಶೋಧನೆಯಲ್ಲಿ ಕೆಲಸ ಮಾಡಿದ ಅಪ್ರತಿಮ ವ್ಯಕ್ತಿ ಇಲಿಯನ್. ಇಲಿಯನ್ ಡಾಕ್ಟರೇಟ್ ಪದವಿ ಇಲ್ಲದೆಯೂ ನೊಬೆಲ್ ಪ್ರಶಸ್ತಿ ಪಡೆದ ಅಪರೂಪದ ವಿಜ್ಞಾನಿ. ಈಕೆಯ ಸಂಶೋಧನೆ ಮತ್ತು ಔಷಧ ತಯಾರಿಕೆಯಿಂದ ಜೀವ ಪಡೆದ ಸಹಸ್ರ ಸಹಸ್ರ ಜನ ಕೃತಜ್ಞತೆಯಿಂದ ಬರೆವ ಆತ್ಮೀಯ ಪತ್ರಗಳ ರಾಶಿಯೇ ಇಲಿಯನ್ ಬಳಿ ಇತ್ತು.

'ಪ್ರಿಯ ಮಿಸ್. ಇಲಿಯನ್,

ಇವತ್ತು ದಿನಪತ್ರಿಕೆ ತೆರೆದೆ, ನಿಮಗೆ ನೊಬೆಲ್ ಪ್ರಶಸ್ತಿ ಬಂದ ಸುದ್ದಿ ಸಂತಸದ ಕಂಬನಿಯನ್ನು ತಂದಿತು. ನನ್ನ ಮಗಳು ಟಿಫನಿ, ಹರ್ಪಿಸ್ ಮಿದುಳುರಿತಕ್ಕೆ ಬಲಿಯಾದಾಗ, ಈ ರೋಗಕ್ಕಿರುವ ಒಂದೇ ಒಂದು ಔಷಧ 'ಅಸಿಕ್ಲೋವೀರ್' (Acyclovir) ಎಂದು ವೈದ್ಯರು ತಿಳಿಸಿದರು. ಗಂಟೆಗಟ್ಟಲೆ, ದಿನಗಟ್ಟಲೆ, ವಾರಗಳು, ವರ್ಷಗಳು, ಬಿಡದ ಹಟದಲ್ಲಿ, ತಾಳ್ಮೆಯಲ್ಲಿ, ಪ್ರೀತಿಯಲ್ಲಿ ಕೆಲಸ ಮಾಡಿ ಒಂದು ಹೊಸ ಔಷಧವನ್ನು ಕಂಡು ಹಿಡಿಯುವ ನಿಮಗೆ ನನ್ನ ಅನಂತ ವಂದನೆಗಳು.'

'ಪ್ರಿಯ ಮಿಸ್. ಇಲಿಯನ್,

ನೀವು ಕಂಡು ಹಿಡಿದ 'ಇಮ್ಯುರಾನ್' (imuran) ಔಷಧದಿಂದ ಲಾಭ ಪಡೆದ ಸಾವಿರಾರು ಜನರಲ್ಲಿ ನಾನೂ ಒಬ್ಬ. ಏಳು ವರ್ಷಗಳ ಹಿಂದೆ ನಾನು ನನ್ನ ತಮ್ಮನಿಂದ ಮೂತ್ರಪಿಂಡವನ್ನು ಪಡೆದೆ. ನನ್ನ ಬದುಕು ಸಂಪೂರ್ಣ ಬದಲಾಯಿಸಿತು, ನನಗೆ ಪುನರ್ಜನ್ಮ ಲಭಿಸಿತು. ನಿಮಗೆ ಕೃತಜ್ಞತೆ ಹೇಗೆ ತಿಳಿಸಲಿ'

'ಪ್ರೀತಿಯ ಮಿಸ್. ಇಲಿಯನ್,

ನನ್ನ ಪುಟ್ಟ ಮಗನಿಗೆ ಎರಡು ವರ್ಷದ ಹಿಂದೆ ತೀವ್ರತರದ ರಕ್ತದ ಕ್ಯಾನ್ಸರ್ ಕಾಣಿಸಿಕೊಂಡಿತು. ಆ ದಿನದಿಂದ ಪ್ರತಿ ರಾತ್ರಿ ನನ್ನ ಮಗನಿಗೆ 6 ಎಂ.ಪಿ. ಮಾತ್ರೆಗಳನ್ನು ಕೊಡುತ್ತಿದ್ದೇನೆ. ಇಂಥಾ ಅದ್ಭುತದ ಔಷಧವನ್ನು ಕಂಡು ಹಿಡಿದು, ನನ್ನ ಮಗುವಿನ ಜೀವ ಉಳಿಸಿದವರಾರು ಎಂಬ ಪ್ರಶ್ನೆ ಸದಾ ನನ್ನನ್ನು ಕಾಡುತ್ತಿತ್ತು. ಈದಿನ ದಿನಪತ್ರಿಕೆಯಲ್ಲಿ ನಿಮಗೆ ನೊಬೆಲ್ ಪ್ರಶಸ್ತಿ ಬಂದ ವಿಷಯ ಓದಿ ಆ ಮಹಾನ್ ವ್ಯಕ್ತಿ ತಾವೆಂದು ತಿಳಿಯಿತು. ಇಲಿಯನ್, ನಿಮಗೆ ಅನಂತ ವಂದನೆಗಳು.'

ಇಂಥ ಸಾವಿರಾರು ಪತ್ರಗಳು ಇಲಿಯನ್ ಮೇಜನ್ನು ತುಂಬಿತ್ತು. ತನ್ನ ಕೆಲಸಕ್ಕೆ ನಿಜವಾದ ಪ್ರಶಸ್ತಿ, ನೊಬೆಲ್ ಪಾರಿತೋಷಿಕ ಅಲ್ಲ, ಈ ಪತ್ರಗಳು. ಒಂದು ಮನುಷ್ಯ ಜೀವ, ಸಾವಿನಿಂದ ಬದುಕುಳಿದ ಇಂಥಾ ರೋಮಾಂಚನದ ಘಟನೆಗಳು ಎಂದು ಇಲಿಯನ್ ಹೇಳುತ್ತಿದ್ದರು. ಇಲಿಯನ್‌ಗೆ ಜೀವರಸಾಯನಶಾಸ್ತ್ರ (biochemistry) ಒಂದು ಅಮೂರ್ತ ವಿಜ್ಞಾನ ಶಾಖೆಯಲ್ಲ. ಆಕೆಗದು ಪ್ರತಿರೋಗಕ್ಕೂ ಔಷಧ ಕಂಡು ಹಿಡಿವ ಸತತ ಶೋಧನೆಯ ಜೀವಂತ ರಂಗ. ಬದುಕಿನಲ್ಲಿ ಎದುರಾದ ವೈಯಕ್ತಿಕ ದುರಂತಗಳನ್ನು ಇಲಿಯನ್ ಸವಾಲುಗಳಂತೆ ಎದುರಿಸಿದಳು. ಆಕೆಯ ಔಷಧಗಳನ್ನು ತೆಗೆದುಕೊಂಡು ಲಾಭ ಪಡೆದ ರೋಗಿಗಳು ಆಕೆಯ ಹೊಸ ಔಷಧದ ಹುಡುಕಾಟಕ್ಕೆ ಮತ್ತಷ್ಟು ಪುಷ್ಟಿ ಕೊಟ್ಟರು. ಔಷಧಗಳನ್ನು ಕಂಡುಹಿಡಿಯುವುದು ಇಲಿಯನ್‌ಳ ಉದ್ಯೋಗವಲ್ಲ, ಅದು ಆಕೆಯ ಬದುಕಿನ ಧ್ಯೇಯವಾಗಿದೆ.

ಅಮೆರಿಕೆಯ ಗರ್‌ಟ್ರೂಡ್ ಬಿ. ಎಲಿಯನ್ ಜನವರಿ 23, 1918ರಲ್ಲಿ ನ್ಯೂಯಾರ್ಕಿನಲ್ಲಿ ಜನಿಸಿದಳು. ಇಲಿಯನ್ ಹನ್ನೊಂದು ವರ್ಷದವಳಿದ್ದಾಗ, ತಂದೆಯ ಉದ್ದಿಮೆಯಲ್ಲಿ ಏರುಪೇರುಂಟಾಗಿ, ಸಂಪೂರ್ಣ ದಿವಾಳಿ ಎದ್ದು ನಿರ್ಗತಿಕನಾದ. ತಟ್ಟನೆ ಇಲಿಯನ್‌ಳ ಓದು ವಿದ್ಯಾಭ್ಯಾಸ ಭವಿಷ್ಯದ ಭರವಸೆಗಳೇ ಬದಲಾದವು. ಹದಿನೈದನೇ ವರ್ಷದಲ್ಲಿ ಪ್ರೌಢಶಾಲೆಯಿಂದ

ಹೊರಬಂದಾಗ, ಇಲಿಯನ್ ಕಾಲೇಜಿಗೆ ಹೋಗಬಯಸಿದ್ದಳು. ಆದರೆ ಹಣದ ತೊಂದರೆ ಇತ್ತು. ಅದೃಷ್ಟಕ್ಕೆ ನ್ಯೂಯಾರ್ಕ್ ಸಿಟಿ ಕಾಲೇಜಿನಲ್ಲಿ ಉಚಿತ ವಿದ್ಯಾಭ್ಯಾಸದ ಅವಕಾಶ ದೊರೆಯಿತು. ಪ್ರವೇಶಕ್ಕೆ ಅಖಂಡ ಸ್ಪರ್ಧೆ ಇದ್ದರೂ, ಇಲಿಯನ್ ಅತ್ಯಧಿಕ ಅಂಕಗಳನ್ನು ತೆಗೆದುಕೊಂಡ ಕಾರಣ, ಹಂಟರ್ ಕಾಲೇಜಿನಲ್ಲಿ ಪ್ರವೇಶ ದೊರೆಯಿತು. ಹಂಟರ್ ಕಾಲೇಜಿನಲ್ಲೇನಾದರೂ ಫೀಜು ಕೊಡಬೇಕಿದ್ದರೆ, ಇಲಿಯನ್ ಪದವಿ ಕೂಡಾ ಪಡೆಯಲು ಸಾಧ್ಯವಾಗುತ್ತಿರಲಿಲ್ಲ.

ಇಲಿಯನ್‌ಗೆ ಪ್ರೀತಿಯ ತಾತನಿದ್ದ. ಆದರೆ ಇಲಿಯನ್ ಹದಿಮೂರು ವರ್ಷದವಳಿದ್ದಾಗ ತಾತ ಹೊಟ್ಟೆಯ ಕ್ಯಾನ್ಸರಿನಿಂದ ನರಳಿ, ನೋವುಂಡು ತೀರಿಕೊಂಡ. ಆ ಕ್ಷಣವೇ ಇಲಿಯನ್ ತನ್ನ ಬದುಕಿನ ಧ್ಯೇಯವನ್ನು ಆಯ್ದುಕೊಂಡಿದ್ದಳು. ಕ್ಯಾನ್ಸರ್ ವಿರುದ್ಧದ ಕೆಲಸ ತನ್ನ ಗುರಿ ಎನಿಸಿತ್ತು. ಅದು ಅಷ್ಟು ತಟ್ಟನೆ ಅವಳೆದುರಿಗೆ ಮೂಡಿದ ಧ್ಯೇಯವಾಗಿತ್ತು. ಇದೀಗ ಕಾಲೇಜು ಪ್ರವೇಶಿಸಿದ ಇಲಿಯನ್ ರಸಾಯನಶಾಸ್ತ್ರವನ್ನು ಆರಿಸಿಕೊಂಡಳು. 1937ರಲ್ಲಿ ಇಲಿಯನ್ ಅತ್ಯಧಿಕ ಅಂಕಗಳನ್ನು ತೆಗೆದುಕೊಂಡು ಪದವೀಧರಳಾದಳು. ರಸಾಯನಶಾಸ್ತ್ರದಲ್ಲಿ ಸಂಶೋಧನೆ ಮಾಡಲು ಡಾಕ್ಟರೇಟ್ ಡಿಗ್ರಿ ಬೇಕಾಗುವುದೆಂದು ತಿಳಿದ ಇಲಿಯನ್, ಹದಿನೈದು ಕಡೆಗಳಿಗೆ ಅರ್ಜಿ ಹಾಕಿಕೊಂಡಳು. ಆದರೆ ಅತ್ಯಧಿಕ ಅಂಕಗಳನ್ನು ತೆಗೆದುಕೊಂಡಿದ್ದರೂ, ಒಂದೇ ಒಂದು ಕಡೆಯಿಂದಲೂ ವಿದ್ಯಾರ್ಥಿವೇತನವಾಗಲಿ, ಫೆಲೋಶಿಪ್ ಆಗಲಿ ಸಿಗಲಿಲ್ಲ. ಇದಕ್ಕೆ ಕಾರಣ ಲಿಂಗತಾರಮ್ಯದ ನೀತಿಗಳಾಗಿತ್ತು. ಮಹಿಳೆಯಾಗಿ ಈಕೆಗೆ ಬಹಳಷ್ಟು ಬಾಗಿಲುಗಳು ಮುಚ್ಚಿದ್ದವು. ಆರ್ಥಿಕ ಕುಸಿತದ ಕಾಲದಲ್ಲಿ ಹೆಚ್ಚು ಉದ್ಯೋಗಗಳೂ ಉಳಿದಿರಲಿಲ್ಲ. ಇದ್ದ ಕೆಲಸಗಳೆಲ್ಲ ಪುರುಷರಿಗೆ ಮೀಸಲಿದ್ದವು.

ಇಲ್ಲಿಯವರೆಗೂ ಹೆಣ್ಣು ಮಕ್ಕಳ ಶಾಲೆಯಲ್ಲಿ ಕಲಿತು ಬೆಳೆದ ಇಲಿಯನ್‌ಗೆ ಹೊರ ಜಗತ್ತಿನ ಲಿಂಗ ತಾರತಮ್ಯದ ರೀತಿಗಳ ಅರಿವೇ ಇರಲಿಲ್ಲ. ಬಹಳಷ್ಟು ಹೆಣ್ಣು ಮಕ್ಕಳು ಪಾಠಹೇಳಿಕೊಡುವ ಕೆಲಸ ಹಿಡಿಯಬೇಕಿತ್ತು. ಕಾರಣ ಪ್ರಯೋಗಶಾಲೆಗಳಲ್ಲಿ ಹೆಂಗಸರಿಗೆ ಪ್ರವೇಶಕೊಡಲು ನಿರಾಕರಿಸುತ್ತಿದ್ದರು. ಸಂಶೋಧನಾ ರಂಗಕ್ಕೆ ಮಹಿಳೆಗೆ ಪ್ರವೇಶ ತೀರಾ ಕಷ್ಟದ್ದಾಗಿತ್ತು. ಇಲಿಯನ್‌ಗೆ ಮೊಟ್ಟ ಮೊದಲ ಬಾರಿಗೆ ಈ ಅನುಭವಗಳು ಆಘಾತ ತಂದವು. ಇಂಥ ಸಮಯದಲ್ಲಿ ಒಂದು ಪ್ರತಿಷ್ಠಿತ ಸಂಶೋಧನಾ ಕೆಲಸದ ಸಂದರ್ಶನಕ್ಕೆ ಆಹ್ವಾನ ಬಂದಿತು. ತನ್ನ ಪ್ರತಿಭೆ, ಅತ್ಯಧಿಕ ಅಂಕಗಳಿಂದ ಖಂಡಿತಾ ಆ ಕೆಲಸ ತನಗೆ ಸಿಗುವುದೆಂಬ ಭರವಸೆಯಿಂದ ಇಲಿಯನ್ ಹೋದಳು. ಆದರೆ ಸಂದರ್ಶನಕಾರರು - 'ನಿಮಗೆ ಬಹಳಷ್ಟು ಅರ್ಹತೆ ಇದೆ ನಿಜ. ಆದರೆ ನಾವು ಹಿಂದೆಂದೂ ನಮ್ಮ ಪ್ರಯೋಗಶಾಲೆಯಲ್ಲಿ ಮಹಿಳೆಯರಿಗೆ ಪ್ರವೇಶ ನೀಡಿಲ್ಲ. ಪ್ರಯೋಗಶಾಲೆಯಲ್ಲಿ ನಿಮ್ಮ ಇರುವಿಕೆ ಇತರರನ್ನು ಅವರ ಕೆಲಸದಿಂದ ಚಂಚಲಗೊಳಿಸುತ್ತದೆ' ಎಂದು ಹೇಳಿದಾಗ ಇಲಿಯನ್ ದಿಗ್ಭ್ರಮೆಯಿಂದ ಕಣ್ಣರಳಿಸಿ ನಿಂತು ಬಿಟ್ಟಳು. ಸಂಶೋಧನಾ ರಂಗದ ಮುಚ್ಚಿದ ಬಾಗಿಲುಗಳನ್ನು ಬಡಿದೂ ಬಡಿದೂ ಕೈ ಸೋತ ಇಲಿಯನ್, ಹತಾಶಳಾಗಿ ಆಪ್ತಕಾರ್ಯದರ್ಶಿ ತರಪೇತಿನ ಶಾಲೆಗೆ ದಾಖಲಾದಳು. ಇದೇ ಸಮಯದಲ್ಲಿ ಇಲಿಯನ್ ತನ್ನ ಕನಸಿನ ರಾಜಕುಮಾರನನ್ನು ಭೇಟಿಯಾಗಿದ್ದಳು. ಲಿಯನಾರ್ಡ್ ಸಿಟಿ ಕಾಲೇಜಿನ ಪ್ರತಿಭಾವಂತ ವಿದ್ಯಾರ್ಥಿ. ಓದು ಮುಗಿಸಿ ವಿವಾಹವಾಗಲು ಯೋಜಿಸಿದರು. ಆದರೆ ಲಿಯನಾರ್ಡ್ ತಟ್ಟನೆ ಕಾಯಿಲೆ ಬಿದ್ದ. ಹೃದಯದ ಕವಾಟಗಳಿಗೆ ತಗಲುವ ಸೋಂಕು ಕಾಯಿಲೆ ತಗುಲಿ, ಲಿಯನಾರ್ಡ್ ತೀರಿಕೊಂಡ. ಆ ಕಾಲಕ್ಕೆ ಈ ಕಾಯಿಲೆಗೆ ಚಿಕಿತ್ಸೆ ಇರಲಿಲ್ಲ. ಈ ಘಟನೆ ಇಲಿಯನಳ ಹೃದಯವನ್ನು ಒಡೆದಿತ್ತು. ಬದುಕು ಪೂರಾ ತನ್ನ ಪ್ರಿಯಕರನ ಸಾವಿನಿಂದ ಆಕೆ ಚೇತರಿಸಿಕೊಳ್ಳಲಿಲ್ಲ. ಇಲಿಯನ್ ಅವಿವಾಹಿತಳಾಗಿಯೇ ಉಳಿದಳು.

ಏಳು ವರ್ಷಗಳ ಕಾಲ ಈ ಪ್ರತಿಭಾವಂತ ಪದವೀಧರೆ ಸಣ್ಣ ಸಣ್ಣ ತಾತ್ಕಾಲಿಕ ಹುದ್ದೆಗಳಲ್ಲಿ ದುಡಿಯುತ್ತಾ, ಒಂದು ವರ್ಷದ 'ಗ್ರಾಜುಯೇಟ್ ಶಾಲೆ'ಯ ಖರ್ಚಿಗೆ ಬೇಕಾದಷ್ಟು ಹಣವನ್ನು ಕೂಡಿಸಲು ಸಾಧ್ಯವಾಯಿತು. ನ್ಯೂಯಾರ್ಕ್ ವಿಶ್ವವಿದ್ಯಾಲಯದ ರಸಾಯನಶಾಸ್ತ್ರದ ತರಗತಿಯಲ್ಲಿ ಇಲಿಯನ್ ಒಬ್ಬಳೇ ಮಹಿಳೆ. ಇಲಿಯನ್ ಅರ್ಧ ದಿನ ವೈದ್ಯರೊಬ್ಬರಲ್ಲಿ ಬಂದ ರೋಗಿಗಳನ್ನು ಕೂಡಿಸಲು ಸ್ವಾಗತಕಾರಳಾಗಿ ಕೆಲಸ ಮಾಡಿ ತನ್ನ ಸಾರಿಗೆ ವೆಚ್ಚ, ಊಟದ ವೆಚ್ಚವನ್ನು ಹೊಂದಿಸುತ್ತಿದ್ದಳು. ಜೊತೆಗೆ ನ್ಯೂಯಾರ್ಕ್ ಪ್ರೌಢ ಶಾಲೆಗಳಲ್ಲಿ ಬದಲಿ ಪ್ರಾಧ್ಯಾಪಕಳಾಗಿಯೂ ಕೆಲಸ ಮಾಡಿದಳು. ಇಡೀ ರಾತ್ರಿಗಳು, ವಾರಾಂತ್ಯಗಳು ನ್ಯೂಯಾರ್ಕ್ ವಿಶ್ವವಿದ್ಯಾಲಯದಲ್ಲಿ ತನ್ನ ಸ್ನಾತಕೋತ್ತರ ಪದವಿಗಳಿಗಾಗಿ ದುಡಿದಳು.

1942, ಯುದ್ಧದ ದಿನಗಳು. ಇದೀಗ ಪ್ರಯೋಗಶಾಲೆಯಲ್ಲಿ ಕೆಲಸ ಮಾಡಲು ಲಭ್ಯವಿದ್ದ ಪುರುಷ ರಸಾಯನಶಾಸ್ತ್ರಜ್ಞನ ಸಂಖ್ಯೆ ಸಣ್ಣದಾಗಿತ್ತು. ಯುದ್ಧ ಹಿಗ್ಗಿ ಮುಂದುವರೆದಂತೆ, ತಟ್ಟನೆ ಮಹಿಳಾ ವಿಜ್ಞಾನಿಗಳಿಗೆ ಅವಕಾಶಗಳ ಬಾಗಿಲು ತೆರೆದವು. ಅಂತೂ ಇಲಿಯನ್‌ಗೆ ಮೊಟ್ಟಮೊದಲ ಬಾರಿಗೆ ಪ್ರಯೋಗಶಾಲೆಯಲ್ಲೊಂದು ಕೆಲಸ ದೊರೆತಾಗ ತನ್ನ ಇತರ ಸಣ್ಣ ಪುಟ್ಟ ಕೆಲಸಗಳನ್ನು ನಿಲ್ಲಿಸಿದಳು. 'ಬರೋಸ್ ವೆಲ್ಕಮ್ ಕಂಪನಿ'ಯ ರಸಾಯನಶಾಸ್ತ್ರಜ್ಞ ಜಾರ್ಜ್ ಹಿಚಿಂಗ್ಸ್ ಬಳಿ ಇಲಿಯನ್‌ಗೆ ಕೆಲಸ ದೊರೆಯಿತು. ಆತನ ಏಕಮಾತ್ರ ಆಸಕ್ತಿ ರಾಸಾಯನಿಕ ಸಂಯುಕ್ತಗಳನ್ನು (compounds) ತಯಾರಿಸುವುದಾಗಿತ್ತು. ಇಲಿಯನ್‌ಗೆ ಆಸಕ್ತಿ ಹುಟ್ಟಿಸಿದ್ದು ಈ ಸಂಯುಕ್ತಗಳು. ಏನೇನೆಲ್ಲ ಮಾಡಬಲ್ಲವೆಂಬ ವಿಷಯ. ವಾರಕ್ಕೆ ಐವತ್ತು ಡಾಲರ್ ಸಂಬಳದ ಮೇಲೆ ಇಲಿಯನ್ ಇಲ್ಲಿ ಹಿಚ್ಚಿಂಗ್ಸ್‌ಗೆ ಸಹಾಯಕಳಾಗಿ ಸೇರಿಕೊಂಡಳು. ಹಿಚಿಂಗ್ಸ್ ಮತ್ತು ಇಲಿಯನ್ 1940ರ ದಶಕದಲ್ಲಿ

ಒಟ್ಟಿಗೇ ಕೆಲಸವನ್ನು ಆರಂಭಿಸಿದಾಗ ನ್ಯೂಕ್ಲಿಕ್ ಆಮ್ಲದ (nucleic acid) ಬಗ್ಗೆ ಹೆಚ್ಚು ತಿಳಿದಿರಲಿಲ್ಲ. ಒಸ್ವಾಲ್ಡ್ ಆವರಿ ಇದೀಗಷ್ಟೇ ಅನುವಂಶೀಯ ಮಾಹಿತಿಯನ್ನು ಪೀಳಿಗೆಯಿಂದ ಪೀಳಿಗೆಗೆ ಕೊಂಡೊಯ್ಯುವ 'ವಾಹಕ' - ಡಿ.ಎನ್.ಎ. (deoxy ribonulecic acid) ಎಂದು ಕಂಡು ಹಿಡಿದಿದ್ದ. ಹಿಚೆಂಗ್ಸ್ ಜೊತೆಯಲ್ಲಿ ಇಲಿಯನ್, ಸಹಜ ಮತ್ತು ಅಸಹಜ ಜೀವಕೋಶಗಳು ಪುನರುತ್ಪಾದಿಸುವ ರೀತಿಯಲ್ಲಿಯ ಸೂಕ್ಷ್ಮ ವ್ಯತ್ಯಾಸವನ್ನು ಅಧ್ಯಯನ ಮಾಡಿದಳು. ನಂತರ ಸಹಜ ಜೀವಕೋಶಗಳಿಗೆ ತೊಂದರೆ ಮಾಡದೆ, ಅಸಹಜ ಜೀವಕೋಶಗಳ ಜೀವನ ವೃತ್ತವನ್ನು ತುಂಡರಿಸುವಂಥ ಔಷಧಗಳನ್ನು ಕಂಡು ಹಿಡಿಯಲಿದ್ದರು.

ಪ್ರತಿ ಜೀವಕೋಶಕ್ಕೂ ಪ್ರತ್ಯುತ್ಪನ್ನಗೊಳ್ಳಲು ನ್ಯೂಕ್ಲಿಕ್ ಆಮ್ಲದ ಅಗತ್ಯವಿದೆ. ಆದರೆ ಬ್ಯಾಕ್ಟೀರಿಯಾ, ಗಡ್ಡೆ ಗಂಟು, ಪ್ರೊಟೋಜೋವಾಗಳ ಜೀವಕೋಶಗಳಿಗೆ, ಅವುಗಳ ಅತಿವೇಗದ ಬೆಳವಣಿಗೆಗೆ, ಅತ್ಯಧಿಕ ಪ್ರಮಾಣದಲ್ಲಿ ನ್ಯೂಕ್ಲಿಕ್ ಆಮ್ಲ ಬೇಕಾಗುತ್ತದೆ. ಇಂಥ ರೋಗಕಾರಣ ಜೀವಕೋಶಗಳ ಜೀವನ ವೃತ್ತದಲ್ಲಿ ತಡೆಯುಂಟು ಮಾಡಿ, ಅವುಗಳ ಬೆಳವಣಿಗೆಯನ್ನು ತಡೆಯಬಹುದು ಎಂದು ಊಹಿಸಿದರು. ಇಲಿಯನ್ (purine) ಪ್ಯೂರೀನ್ ಎಂಬ ನ್ಯೂಕ್ಲಿಕ್ ಆಮ್ಲವನ್ನು ಕುರಿತು ಸಂಶೋಧನೆ ಮಾಡಿದಳು.

ಹಿಚೆಂಗ್ಸ್, ಇಲಿಯನ್‌ಗೆ ತನ್ನಿಚ್ಛೆಯಂತೆ ದುಡಿಯುವ ಸ್ವಾತಂತ್ರ್ಯ ಕೊಟ್ಟಿದ್ದ. ಎರಡನೇ ವರ್ಷಗಳಲ್ಲಿ ಇಲಿಯನ್ ತನ್ನ ಪ್ರಯೋಗಗಳ ಫಲಿತಾಂಶಗಳನ್ನು, ವೈಜ್ಞಾನಿಕ ಪ್ರಬಂಧಗಳನ್ನು ಪ್ರಕಟಿಸತೊಡಗಿದಳು. ಇಲಿಯನ್ 225ಕ್ಕೂ ಹೆಚ್ಚು ವೈಜ್ಞಾನಿಕ ಪ್ರಬಂಧಗಳನ್ನು ಪ್ರಕಟಿಸಿದಳು. ಇದೇ ಸಮಯದಲ್ಲಿ ಇಲಿಯನ್, ಎರಡು ವರ್ಷಗಳ ಕಾಲ, ಪ್ರತಿ ದಿನ ಸಂಜೆ ಕೆಲಸ ಮುಗಿಸಿ, ಸಬ್ವೇ ಹಿಡಿದು ಬ್ರೂಕ್ಲಿನ್ ಪಾಲಿಟೆಕ್ನಿಕ್ ಸಂಸ್ಥೆಗೆ ಪ್ರಯಾಣ ಮಾಡಿ ಪಿ.ಎಚ್.ಡಿ. ಪಡೆಯಲು ಪ್ರಯತ್ನಿಸಿದಳು. ಆದರೆ ಒಂದು ದಿನ ಸಂಸ್ಥೆಯ ಡೀನ್ ಈಕೆಯನ್ನು ಕರೆದು. 'ಕೆಲಸ ಬಿಟ್ಟು ಪೂರ್ಣಾವಧಿ ಪಿ.ಎಚ್.ಡಿ.ಗೆ ತೊಡಗಿಕೊ' ಎಂದು ಆಜ್ಞಾಪಿಸಿದರು. ಇಲಿಯನ್ ಇದಕ್ಕೆ ಸಿದ್ಧವಿರಲಿಲ್ಲ. ಆಕೆಯದು ಕೇವಲ ಸಂಬಳದ ಉದ್ಯೋಗವಾಗಿರಲಿಲ್ಲ. ತನ್ನ ಇಷ್ಟದ ಸಂಶೋಧನೆಯ ಉದ್ಯೋಗದ ಆಸಕ್ತಿಯ ರಂಗ ಅದಾಗಿತ್ತು. ಅಲ್ಲಿಗೆ ಇಲಿಯನ್ ಪಿ.ಎಚ್.ಡಿ. ಪಡೆಯುವ ತನ್ನ ಕನಸನ್ನು ಕೈ ಬಿಟ್ಟಳು.

ತಾತನನ್ನು, ಪ್ರಿಯಕರನ್ನು ಕಳೆದುಕೊಂಡ ಇಲಿಯನ್ ತಾಯಿಯನ್ನೂ ಕಳೆದುಕೊಂಡಳು. ಇಲಿಯನ್‌ಳ ತಾಯಿಗೆ ಗರ್ಭಕೋಶದ ಕ್ಯಾನ್ಸರ್ ಬಡಿಯಿತು. ತಾಯಿ ಬೆಳೆದು ಬಂದ ವಾತಾವರಣ, ಆಕೆ ತನ್ನ ಈ ರೋಗಕ್ಕೆ ವೈದ್ಯರ ಬಳಿ ಹೋಗಲು ಮುಜುಗರ ಪಡುವಂತೆ ಮಾಡಿತ್ತು. ಅದರಲ್ಲೂ ಪುರುಷ ವೈದ್ಯರೇ ಹೆಚ್ಚಿದ್ದ ಕಾಲ. ಕಡೆಗೂ ಕ್ಯಾನ್ಸರ್ ತಾಯಿಯನ್ನು ಕೊಂಡೊಯ್ದಾಗ, ಇಲಿಯನ್‌ಗೆ ಮತ್ತೆ ಆಘಾತ. ಇದೀಗ ಕ್ಯಾನ್ಸರಿಗೊಂದು ಔಷಧ ಕಂಡು ಹಿಡಿಯುವುದು ಅತ್ಯಂತ ವೈಯಕ್ತಿಕ ತುರ್ತಿನ ಕೆಲಸವಾಗಿತ್ತು. ಆಕೆಯ ಮಿದುಳು ಹೃದಯವನ್ನೆಲ್ಲ ಆವರಿಸಿ ನಿಂತ ಸಮಸ್ಯೆ ಇದಾಗಿತ್ತು.

1950ರಲ್ಲಿ ಇಲಿಯನ್ ಕ್ಯಾನ್ಸರ್ ಚಿಕಿತ್ಸೆಗೆ ಒಂದಲ್ಲ ಎರಡು ಔಷಧವನ್ನು ತಯಾರಿಸಿದ್ದಳು. ಮೊದಲನೆಯದು ಪ್ಯೂರೀನ್ ಸಂಯುಕ್ತವಾಗಿದ್ದು ಇದು ರಕ್ತದ ಕ್ಯಾನ್ಸರಿನ ಜೀವಕೋಶಗಳು ರೂಪುಗೊಳ್ಳುವುದನ್ನು ತಡೆಯುತ್ತಿತ್ತು. ತೀವ್ರತರದ ರಕ್ತದ ಕ್ಯಾನ್ಸರಿನಿಂದ ಬಳಲುತ್ತಿದ್ದ ಇಬ್ಬರು ರೋಗಿಗಳ ಮೇಲೆ ಈ ಔಷಧವನ್ನು ಪ್ರಯೋಗಿಸಿದ್ದಳು. ಅದರಲ್ಲೊಬ್ಬಳು ಇಪತ್ತುಮೂರು ವರ್ಷದ ಜೆ.ಬಿ. ಎಂಬ ಮಹಿಳೆ. ಆಕೆಯಲ್ಲಿ ಎಷ್ಟು ಶೀಘ್ರವಾಗಿ ಕ್ಯಾನ್ಸರಿನ ಲಕ್ಷಣಗಳೆಲ್ಲ ಮಾಯವಾದವು ಎಂದರೆ, ವೈದ್ಯರು ತಾವು ಕ್ಯಾನ್ಸರ್ ಎಂದು ಗುರುತಿಸಿದ್ದೇ ಎಲ್ಲೋ ತಪ್ಪಿತ್ತು ಎಂದು ಅನುಮಾನಿಸಿದ್ದರು. ಎರಡು ವರ್ಷಗಳ ಕಾಲ ಜೆ.ಬಿ. ಸಂಪೂರ್ಣ ಆರೋಗ್ಯವಂತಳಾಗಿದ್ದಳು. ಮದುವೆಯಾದಳು, ಒಂದು ಮಗುವನ್ನೂ ಪಡೆದಳು, ಆದರೆ ತಟ್ಟನೆ ಒಂದು ದಿನ ರೋಗ ಪುನರಾಗಮಿಸಿ, ತೀರಿಕೊಂಡಳು. ಆಕೆಗೆ ನಿಜಕ್ಕೂ ರಕ್ತದ ಕ್ಯಾನ್ಸರ್ ಇತ್ತು. ಜೆ.ಬಿ.ಯಂಥಾ ರೋಗಿಗಳಿಗೆ ಹೆಚ್ಚು ಪ್ರಮಾಣದಲ್ಲಿ ಸಾಕಷ್ಟು ದೀರ್ಘ ಕಾಲ ಔಷಧಿಯನ್ನು ನೀಡಿದ್ದರೆ, ಬಹುಶಃ ರೋಗ ವಾಸಿಯಾಗುತ್ತಿತ್ತು. ಆಕೆಯ ಆ ಎರಡು ವರ್ಷಗಳ ಸಮಯದಲ್ಲಿ ಯಾವೊಂದು ಚಿಕಿತ್ಸೆಯನ್ನು ಪಡೆದಿರಲಿಲ್ಲ. ಜೆ.ಬಿ.ಯ ಸಾವು ಇಲಿಯನ್‌ಳ ಹೃದಯ ಹಿಂಡಿತು.

ಇಲಿಯನ್ ಮತ್ತು ಹಿಚೆಂಗ್ಸ್ ಇದೀಗ ತಿರುಗುವ ರಾಟೆಯಲ್ಲಿ ಕುಳಿತ ಅನುಭವ. ಒಮ್ಮೆ ರೋಗಿಗಳು ವಾಸಿಯಾಗಿ, ರೋಗದ ಸಂಪೂರ್ಣ ಲಕ್ಷಣಗಳು ಮಾಯವಾಗಿ ಸ್ವಸ್ಥರಾಗುವರು. ಆದರೆ ಕೆಲವು ವರ್ಷಗಳ ನಂತರ ರೋಗ ಪುನರಾಗಮಿಸಿ ರೋಗಿಗಳನ್ನು ಅಸ್ವಸ್ಥತೆಯ ಅಂಚಿಗೆ ತಳ್ಳುವುದು. ಕ್ಯಾನ್ಸರ್‌ಗೆ ಚಿಕಿತ್ಸೆ ಕಂಡು ಹಿಡಿಯುವುದು ಇಲಿಯನ್‌ಳ ತೀವ್ರ ಶೋಧವಾಯಿತು. ಇಲಿಯನ್ ನೂರಕ್ಕೂ ಹೆಚ್ಚು ಪ್ಯೂರೀನ್ ಸಂಯುಕ್ತಗಳನ್ನು ತಯಾರಿಸಿ ಪರೀಕ್ಷಿಸಿದಳು. ಜೆ.ಬಿ.ಯ ಸಾವಿನಿಂದ ಸುಧಾರಿಸಿಕೊಳ್ಳುತ್ತಿದ್ದಂತೆ ಇಲಿಯನ್ 6 ಮೆರಕಾಪ್ಟೊಪ್ಯೂರೀನ್ (6 mercaptopurine) ಅಥವಾ 6 ಎಂ.ಪಿ. ಎಂಬ ಹೊಸ ಸಂಯುಕ್ತವನ್ನು ಕಂಡು ಹಿಡಿದಳು. ಪ್ರಾಣಿಗಳ ಮೇಲೆ 6 ಎಂ.ಪಿ. ಔಷಧವನ್ನು ಪ್ರಯೋಗಿಸಿದಾಗ, ಅವುಗಳಲ್ಲಿ ಕ್ಯಾನ್ಸರ್ ಗೆಡ್ಡೆಗಳು ಬೆಳೆಯುವುದು ನಿಂತಿತು. 1950ರಲ್ಲಿ ತೀವ್ರತರದ ರಕ್ತದ ಕ್ಯಾನ್ಸರ್ ಬಡಿದ ಮಕ್ಕಳಲ್ಲಿ ಅರ್ಧದಷ್ಟು ಜನ ಮೂರು ನಾಲ್ಕು ತಿಂಗಳಲ್ಲಿ ತೀರಿಕೊಳ್ಳುತ್ತಿದ್ದರು. ಬಹಳಷ್ಟು ಕಡಿಮೆ ಮಕ್ಕಳು ಒಂದು ವರ್ಷದಷ್ಟು ಸಮಯ ಬದುಕಿ ಉಳಿಯುತ್ತಿದ್ದರು. ಆದರೆ 6

ಎಂ.ಪಿ. ಕೊಟ್ಟ ಮಕ್ಕಳಲ್ಲಿ ತಾತ್ಕಾಲಿಕವಾಗಿಯಾದರೂ ರೋಗ ಲಕ್ಷಣಗಳು ಸಂಪೂರ್ಣ ತಗ್ಗುತ್ತಿದ್ದವು. ಇದೀಗ ಇಲಿಯನ್ ಮತ್ತು ಹಿಚಿಂಗ್ಸ್ ರಕ್ತದ ಕ್ಯಾನ್ಸರ್‌ಗೆ ಚಿಕಿತ್ಸೆಯ ಸಾಧ್ಯತೆಯನ್ನು ಕಂಡು ಹಿಡಿದಿದ್ದರು. 'ಪ್ಯೂರೀನೆಥಾಲ್' (purinethol) ಎಂಬ ಹೆಸರಿನಲ್ಲಿ ಈ ಔಷಧ ಮಾರುಕಟ್ಟೆಗೆ ಬಂದಿತು.

6 ಎಂ.ಪಿ. ಒಂದೇ ರೋಗವನ್ನು ತಡೆಗಟ್ಟಲು ಸಮರ್ಥವಾಗಿರಲ್ಲಿ ಹಾಗೆಂದೇ ತಾತ್ಕಾಲಿಕವಾಗಿ ಗುಣ ಹೊಂದಿದ ರೋಗಿಗಳು, ಮತ್ತೆ ರೋಗದಿಂದ ತೀರಿಕೊಳ್ಳುತ್ತಿದ್ದರು. 6 ಎಂ.ಪಿ.ಯ ಪ್ರಭಾವ ದೇಹದಲ್ಲಿ ಬಹುಕಾಲ ಉಳಿಯುವಂತೆ ಮಾಡುವುದು ಇಲಿಯನ್‌ಳ ಉದ್ದೇಶವಾಗಿತ್ತು. ಹಾಗೆಂದೇ 6 ಎಂ.ಪಿ. ಔಷಧದ ಪರಿಣಾಮಗಳನ್ನು 'ಮೆಟಾಬೊಲಿಸಮ್' ತಿಳಿಸಲು ಬಯಸಿದಳು. ಅಲ್ಲಿಯವರೆಗೂ ಯಾರೊಬ್ಬರೂ ಔಷಧವೊಂದರ ಮೆಟಾಬೊಲಿಸಮ್ ಬಗ್ಗೆ ಕೆಲಸ ಮಾಡಿದ ಉದಾಹರಣೆಗಳಿರಲಿಲ್ಲ. ಆದರೆ ಇಲಿಯನ್ ಮುಂದಿನ ಆರು ವರ್ಷಗಳನ್ನು ಈ 6 ಎಂ.ಪಿ. ಔಷಧದ ಪ್ರತಿಯೊಂದು ವಿವರಗಳನ್ನು ತಿಳಿಯಲು ತೊಡಗಿಸಿದಳು. ಕ್ಯಾನ್ಸರ್ ಚಿಕಿತ್ಸೆಗೆ ಒಂದೇ ಔಷಧವಲ್ಲ ಅನೇಕ ಔಷಧಗಳ ಸಮ್ಮಿಶ್ರಣ ಚಿಕಿತ್ಸೆ ಅಗತ್ಯ ಎಂದು ನಂತರದ ವರ್ಷಗಳಲ್ಲಿ ತಿಳಿದು ಬಂದಿತು. ಹದಿನೆಂಟು ವರ್ಷಗಳ ಕಾಲ ಇಲಿಯನ್, 6 ಎಂ.ಪಿ.ಯನ್ನು ಸುಧಾರಿಸುವತ್ತ ದುಡಿದಳು.

1950ರಲ್ಲಿಯೇ ಇಲಿಯನ್ 6 ಎಂ.ಪಿ. ಔಷಧಕ್ಕೆ ನಿಕಟವಾದ ಥಿಯೋಗ್ವನೀನ್ (thioguanine) ಅನ್ನು ತಯಾರಿಸಿದ್ದಳು. ಇದೀಗ 6 ಎಂ.ಪಿ. ಅಥವಾ ಥಿಯೋಗ್ವಾನೀನ್ ಅನ್ನು ಇತರ ಔಷಧಗಳೊಂದಿಗೆ ಬೆರೆಸಿ ರಕ್ತದ ಕ್ಯಾನ್ಸರಿನ ಮಕ್ಕಳಿಗೆ ಚಿಕಿತ್ಸೆ ಮಾಡಿದಾಗ, ರೋಗವನ್ನು ಸಮರ್ಥವಾಗಿ ತಡೆಗಟ್ಟುವುದು ಸಾಧ್ಯವಾಯಿತು. ಇಂದಿಗೂ ಕ್ಯಾನ್ಸರ್ ಚಿಕಿತ್ಸೆಯನ್ನು 6 ಎಂ.ಪಿ. ಬಳಸುತ್ತಾರೆ. ಇಂದು ಶೇಕಡಾ 80ರಷ್ಟು ಮಕ್ಕಳಲ್ಲಿ ರಕ್ತದ ಕ್ಯಾನ್ಸರನ್ನು ವಾಸಿ ಮಾಡಲು ಸಾಧ್ಯವಾಗಿದೆ.

ಇಂಥಾ ಕ್ರಾಂತಿಕಾರಿ 6 ಎಂ.ಪಿ. ಔಷಧವನ್ನು ಕಂಡು ಹಿಡಿದಾಗ, ಇಲಿಯನ್‌ಗೆ ಕೇವಲ ಮುವತ್ತೆರಡು ವರ್ಷ. ಇಲಿಯನ್ ರಕ್ತದ ಕ್ಯಾನ್ಸರ್ ಚಿಕಿತ್ಸೆಯಲ್ಲಿ ಹೊಸದೇ ದಿಗಂತವನ್ನು ತೆರೆದಿದ್ದಳು. ಒಂದು ಸಂಯುಕ್ತದಲ್ಲಿ ಮಾಡುವ ಸೂಕ್ಷ್ಮ ರಾಸಾಯನಿಕ ಬದಲಾವಣೆ, ಕ್ಯಾನ್ಸರ್ ಜೀವಕೋಶಗಳನ್ನು ಮೋಸಗೊಳಿಸಬಲ್ಲದು ಎಂದು ಸಾಬೀತು ಮಾಡಿ ಪ್ರದರ್ಶಿಸಿದ್ದಳು. ಇದೀಗ ರೋಗಿಗಳನ್ನು ವಾಸಿ ಮಾಡುವ ಈ ಕೆಲಸ ಇಲಿಯನ್‌ಗೆ ಎಷ್ಟು ಖುಷಿ ಮತ್ತು ಸಮಾಧಾನ ನೀಡಿತ್ತೆಂದರೆ, ತಾನು ಪಿ.ಎಚ್.ಡಿ. ಮಾಡಲಿಲ್ಲ ಎಂಬ ಕೊರಗು ಸಂಪೂರ್ಣ ಮರೆಯಾಗಿತ್ತು. ಆಕೆಗೆ ಬಂದು ತಲುಪುತ್ತಿದ್ದ ನೂರಾರು ಪತ್ರಗಳು ಆಕೆ ಪ್ರಯೋಗಶಾಲೆಯಲ್ಲಿ ನಡೆಸುವ ಕೆಲಸ ಎಷ್ಟೆಲ್ಲ ಜನರ ಬದುಕಿನ ಮೇಲೆ ನೇರ ಪರಿಣಾಮ ಬೀರುತ್ತಿದೆ ಎಂದು ಮನವರಿಕೆ ಮಾಡಿತ್ತು. ಇಲಿಯನ್ ಔಷಧಗಳ ಸರಮಾಲೆಯನ್ನೇ ಕಂಡು ಹಿಡಿದಳು.

ಇದೀಗ 1958ರಲ್ಲಿ ಬೇರೆ ಸಂಶೋಧಕರೂ ಇಲಿಯನ್ ತೋರಿದ ಹಾದಿಯಲ್ಲಿ ನಡೆದಿದ್ದರು. ಬಾಸ್ಟನ್‌ನಲ್ಲಿ ರಾಬರ್ಟ್ ಶ್ವಾರ್ಟ್ 6 ಎಂ.ಪಿ.ಯನ್ನು ಮೊಲಗಳ ಮೇಲೆ ಪ್ರಯೋಗಿಸಿ, ಅವುಗಳ ದೇಹದಲ್ಲಿ ರಕ್ಷಣಾ ವ್ಯವಸ್ಥೆಯ (immune system) ಪ್ರತಿಕ್ರಿಯೆಗಳನ್ನು ಅಧ್ಯಯನ ಮಾಡಿದ. 6 ಎಂ.ಪಿ. ಔಷಧವನ್ನು ನೀಡಿ, ಹೊರಗಿನ 'ಆಂಟಿಜೆನ್'ಗಳನ್ನು ಮೊಲದ ದೇಹಕ್ಕೆ ಸೇರಿಸಿದಾಗ, ಈ ಮೊಲಗಳು ಹೊರಗಿನ ಆಂಟಿಜೆನ್‌ಗೆ ಪ್ರತಿಯಾಗಿ ಯಾವೊಂದು 'ಆಂಟಿಬಾಡಿ'ಗಳನ್ನು ತಯಾರಿಸಲು ಅಸಕ್ತವಾದವು. ಈ ಸಂಶೋಧನೆ ದೇಹದ ಅಂಗಗಳ ಕಸಿಗೆ (transplant) ಸಂಬಂಧಿಸಿದ ಅತ್ಯಂತ ಪ್ರಮುಖ ಶೋಧನವಾಗಿತ್ತು. ವರ್ಷ ವರ್ಷಗಳಿಂದ, ಒಬ್ಬನ ದೇಹದ ಅಂಗಗಳನ್ನು ತೆಗೆದು ಇನ್ನೊಬ್ಬನ ದೇಹದಲ್ಲಿ ನೆಡುವುದು ಶಸ್ತ್ರಚಿಕಿತ್ಸೆಯ ಮೂಲಕ ಸಾಧ್ಯವಿತ್ತು. ಆದರೆ ಈ ರೀತಿ ಅಂಗವನ್ನು ಪಡೆದ ರೋಗಿಯ ದೇಹದ ರಕ್ಷಣಾ ವ್ಯವಸ್ಥೆ ತಟ್ಟನೆ ಪ್ರತಿಕ್ರಿಯೆ ತೋರಿಸಿ, ಈ ಹೊರಗಿನಿಂದ ಕಸಿ ಮಾಡಿದ ಅಂಗಗಳನ್ನು ನಿರಾಕರಿಸಿ, ರೋಗಿ ಕೆಲವೇ ದಿನಗಳಲ್ಲಿ ತೀರಿಕೊಳ್ಳುತ್ತಿದ್ದ. ರಾಯ್ ಕಾಲ್ನ್ ಎಂಬ ಬ್ರಿಟಿಷ್ ಶಸ್ತ್ರವೈದ್ಯನೊಬ್ಬ ನಾಯಿಗಳಲ್ಲಿ ಅಂಗಗಳ ಕಸಿಯ ಪ್ರಯೋಗ ನಡೆಸಿದ್ದ. ಇದೀಗ 6 ಎಂ.ಪಿ.ಯ ಬಗ್ಗೆ ಓದಿದ ಆತ, ಮೂತ್ರಪಿಂಡದ ಕಸಿ ಪಡೆದ ನಾಯಿಯ ಮೇಲೆ ಅದನ್ನು ಪ್ರಯೋಗಿಸಿದ. ಅದ್ಭುತವೆಂಬಂತೆ ನಾಯಿ, ಶಸ್ತ್ರಚಿಕಿತ್ಸೆಯಾದ ಮೇಲೆ ನಲವತ್ತನಾಲ್ಕು ದಿನ ಬದುಕಿತು! ಬರೋಸ್ ವೆಲ್ಕಮ್ ಕಂಪನಿಗೆ ಬಂದಿಳಿದ ಕಾಲ್ನ್, ಇಲಿಯನ್ ಮತ್ತು ಹಿಚಿಂಗ್ಸ್ ಅವರನ್ನು ಭೇಟಿ ಮಾಡಿ, 6 ಎಂ.ಪಿ.ಯ ಇತರ ನಿಕಟ ಔಷಧಗಳನ್ನು ಕೊಡುವಂತೆ ಕೇಳಿಕೊಂಡ. ಅವುಗಳನ್ನು ಪ್ರಯೋಗಿಸಿ ಪರೀಕ್ಷೆ ಮಾಡಲು ಇಚ್ಛಿಸಿದ. ಆತನಿಗೆ ಅನೇಕ ಔಷಧಗಳನ್ನು ಕೊಟ್ಟದ್ದಲ್ಲದೆ, ಮುಂದೆ 'ಇಮ್ಯುರಾನ್' (imuran) ಎಂಬ ಹೆಸರಿನಲ್ಲಿ ಮಾರುಕಟ್ಟೆಗೆ ಇಳಿಯಲಿದ್ದ ಪ್ರಸಿದ್ಧ ಔಷಧವನ್ನೂ ನೀಡಿದ್ದರು. ಇಮ್ಯುರಾನ್ ಎಂಬುದು 6 ಎಂ.ಪಿ.ಯ ಅತ್ಯಂತ ಸುಧಾರಿತ ರೂಪವಾಗಿತ್ತು. ಇದು ದೇಹದ ರಕ್ಷಣಾ ವ್ಯವಸ್ಥೆಯನ್ನು ಅಡಗಿಸುವಲ್ಲಿ ಸಹಾಯಕ ಎಂದು ಪ್ರಯೋಗಗಳು ಸೂಚಿಸಿದ್ದವು. ಮೂತ್ರಪಿಂಡದ ಕಸಿ ಪಡೆದ ನಾಯಿಯೊಂದು ಇಮ್ಯುರಾನ್ ಪಡೆದ ಮೇಲೆ ಸುದೀರ್ಘ ಕಾಲ ಬದುಕಿತ್ತು. 1961ರ ಹೊತ್ತಿಗೆ ಈ ರಂಗದಲ್ಲಿ ಸಾಕಷ್ಟು ಸಂಶೋಧನೆಗಳು ನಡೆದು, ಡಾ. ಜೋಸೆಫ್ ಇ. ಮುರೇ, ಸಂಬಂಧಿಕನಲ್ಲದ ವ್ಯಕ್ತಿಯಿಂದ ಮೂತ್ರಪಿಂಡವನ್ನು ತೆಗೆದು ಕಸಿ ಮಾಡಿ ನೋಡಿದ. ಆತನ ಮೂರನೇ ರೋಗಿ ಜೀವದಿಂದ ಉಳಿದು, 1990ರಲ್ಲಿ ಮುರೇ ನೊಬೆಲ್ ಪ್ರಶಸ್ತಿ ಪಡೆದ. ಇದೀಗ ಇಲಿಯನ್ ಕಂಡು

ಹಿಡಿದ ಔಷಧ, ಅಂಗಗಳ ಕಸಿಯನ್ನು ಸಾಧ್ಯವಾಗಿಸಿತ್ತು. ಮೊಟ್ಟಮೊದಲಿಗೆ ರೋಗಿಗಳ ದೇಹ ಕಸಿ ಮಾಡಿ ನೀಡಿದ ಅಂಗಗಳನ್ನು ನಿರಾಕರಿಸದಿದ್ದ ಕಾರಣ ಜೀವ ಉಳಿದಿತ್ತು ಇಂದಿಗೂ ಮೂತ್ರಪಿಂಡಗಳ ಕಸಿಯಲ್ಲಿ ಇಮ್ಯುರಾನ್‌ನನ್ನು ಬಳಸುತ್ತಾರೆ. ಸಾವಿರ ಸಾವಿರ ಮೂತ್ರಪಿಂಡದ ಕಸಿ ಪಡೆದ ರೋಗಿಗಳು ಇಲಿಯನ್‌ಳ ಔಷಧವನ್ನು ಬಳಸಿದ್ದಾರೆ. ಈ ಔಷಧವನ್ನು ರಕ್ತಹೀನತೆ, ಹೆಪಟೈಟಿಸ್ ಮತ್ತು ಕೀಲುರಿತದ ಚಿಕಿತ್ಸೆಗೂ ಬಳಸುತ್ತಾರೆ. 1967ರಲ್ಲಿ ಮೊಟ್ಟಮೊದಲಿಗೆ ಹೃದಯದ ಕಸಿಗೆ ಒಳಗಾದ ರೋಗಿ, ಇಮ್ಯುರಾನ್ ಪಡೆದ.

1960ರ ದಶದಲ್ಲಿ ಇಲಿಯನ್ 'ಆಲಪ್ಯುರಿನಾಲ್' (allopurinol) ಎಂಬ ಸಂಯುಕ್ತವನ್ನು ಕಂಡು ಹಿಡಿದಳು. ಈ ಸಂಯುಕ್ತ ದೇಹದಲ್ಲಿಯ ಯೂರಿಕ್ ಆಮ್ಲದ ಉತ್ಪಾದನೆಯನ್ನು ಕಡಿಮೆ ಮಾಡುತ್ತಿತ್ತು. ದೇಹದಲ್ಲಿ ವಿಪರೀತದ ಯೂರಿಕ್ ಆಮ್ಲವಿದ್ದರೆ, ಅದು ತೀರಾ ನೋವಿನದಷ್ಟೇ ಅಲ್ಲ, ಜೀವಕ್ಕೇ ಅಪಾಯದ್ದು. ದೇಹದಲ್ಲಿ ವಿಪರೀತ ಯೂರಿಕ್ ಆಮ್ಲ ಉತ್ಪಾದನೆಯಾದರೆ, ಇಲ್ಲ ಮೂತ್ರಪಿಂಡಗಳು ಸರಿಯಾದ ಪ್ರಮಾಣದಲ್ಲಿ ವಿಸರ್ಜಿಸದಿದ್ದರೂ ಈ ಬಗೆಯಲ್ಲಿ ಯೂರಿಕ್ ಆಮ್ಲ ಹೆಚ್ಚಾಗಬಲ್ಲದು. ಇಂಥಾ ಸಮಯದಲ್ಲಿ ಕೀಲುಗಳಲ್ಲಿ ಯೂರಿಕ್ ಆಮ್ಲ ಹರಳುಗಳಾಗಿ ಶೇಖರಗೊಂಡು, ಕೀಲುಗಳ ವಿಪರೀತದ ನೋವಿಗೆ ಕಾರಣವಾಗುತ್ತದೆ. ಹೀಗೆ ಸಂಗ್ರಹವಾದ ಯೂರಿಕ್ ಆಮ್ಲ ಅತಿ ನೋವಿನ ಮೂತ್ರಪಿಂಡದ ಕಲ್ಲುಗಳಾಗಿಯೂ ಕಾಣಿಸಿಕೊಂಡು, ಮೂತ್ರಪಿಂಡಗಳಲ್ಲಿ ತಡೆಯುಂಟು ಮಾಡಿ, ಮೂತ್ರಪಿಂಡಕ್ಕೆ ಹಾನಿಯಾಗುವುದು. ಆಲುಪ್ಯುರಿನಾಲ್ ಕಂಡು ಹಿಡಿಯುವುದಕ್ಕೆ ಮೊದಲು, ಪ್ರತಿ ವರ್ಷ ಅಮೆರಿಕಾ ಒಂದರಲ್ಲಿಯೇ ಸಂಧಿವಾತದ ತೊಂದರೆಗೀಡಾದ ಹತ್ತು ಸಾವಿರ ಜನ, ಮೂತ್ರಪಿಂಡಗಳಿಗೆ ತಡೆಯುಂಟಾಗಿ ಸಾಯುತ್ತಿದ್ದರು. 1963ರಲ್ಲಿ ಆಲಪ್ಯುರಿನಾಲ ಕ್ಲಿನಿಕಲ್ ಪರೀಕ್ಷೆಗಳು ನಡೆಯುತ್ತಿದ್ದಾಗ, ಸಂಧಿತವಾತದಿಂದ ಹೆಳವನಾದ ರಾತ್ರಿ ವಾಚಮನ್ ಒಬ್ಬನಿಗೆ, ಮೊಟ್ಟ ಮೊದಲ ಬಾರಿ ಈ ಔಷಧವನ್ನು ನೀಡಲಾಯಿತು. ಮೂರೇ ದಿನದಲ್ಲಿ ನೋವು ಶಮನವಾಗಿ, ಆತನು ತನ್ನ ಕೆಲಸಕ್ಕೆ ಹಿಂತಿರುಗಿದ್ದ. ಹತ್ತು ವರ್ಷಗಳ ನಂತರ ಆಲಪ್ಯುರಿನಾಲ್ ದಕ್ಷಿಣ ಅಮೆರಿಕದ ಅತಿದೊಡ್ಡ ಸಮಸ್ಯೆಯಾದ 'ಲೆಶಮನಿಯಾಸಿಸ್' (leshmaniasis) ಎಂಬ ರೋಗಕ್ಕೂ ಚಿಕಿತ್ಸೆಯಾಗಬಲ್ಲದು ಎಂದು ತಿಳಿದು ಬಂದಿತು.

1976ರಲ್ಲಿ ಹಿಚಿಂಗ್ಸ್ ನಿವೃತ್ತಿ ಹೊಂದಿದಾಗ, ಇಲಿಯನ್ ಸಂಶೋಧನೆಯ ಉಪಾಧ್ಯಕ್ಷಳಾದಳು ಹಾಗೂ 'ಪ್ರಯೋಗಿಕ ಚಿಕಿತ್ಸಾ ವಿಭಾಗ'ದ ಮುಖ್ಯಸ್ಥಳಾದಳು. ಅಮೂರ್ತ ವಿಜ್ಞಾನದಲ್ಲಿ ಇಲಿಯನ್‌ಗೆ ಆಸಕ್ತಿ ಇರಲಿಲ್ಲ. ಆಕೆಯ ಸಂಶೋಧನೆಗೆ ಮಹತ್ತರ ಉದ್ದೇಶವಿತ್ತು ರೋಗ ನಿವಾರಣೆಯ ಧ್ಯೇಯವಿತ್ತು. 1986ರಲ್ಲಿ ಇಲಿಯನ್ ವೈರಸ್‌ವಿರೋಧಿ ಔಷಧವನ್ನು ಕಂಡು ಹಿಡಿಯುವತ್ತ ತನ್ನ ಗಮನ ಹರಿಸಿದಳು. ವಿಜ್ಞಾನಿಗಳು ವೈರಸ್‌ವಿರೋಧಿ ಔಷಧವನ್ನು ಕಂಡು ಹಿಡಿಯಲು ಸಾಧ್ಯವೇ ಇಲ್ಲ ಎಂದು ಗಟ್ಟಿಯಾಗಿ ನಂಬಿದ್ದ ಕಾಲ. ಕಾರಣ ವೈರಸ್‌ನ ಡಿ.ಎನ್.ಎ.ಯನ್ನು ಹಾಳು ಮಾಡಬಲ್ಲ ಔಷಧ, ಆರೋಗ್ಯವಂತ ಜೀವಕೋಶಗಳ ಡಿ.ಎನ್.ಎ.ಯನ್ನೂ ಹಾಳು ಮಾಡುವುದೆಂಬುದು ಅವರ ವಾದವಾಗಿತ್ತು. ಹಾಗೆಂದೇ ವೈರಸ್ ವಿರೋಧಿ ಸಂಶೋಧನೆಯತ್ತ ಯಾರೂ ಕೆಲಸ ಮಾಡಿರಲಿಲ್ಲ. 1948ರಲ್ಲಿ ಇಲಿಯನ್ ಕಂಡು ಹಿಡಿದ ಮೊಟ್ಟಮೊದಲ ಪ್ಯುರೀನ್ ಸಂಯುಕ್ತವಾದ, ಡೈಅಮೈನೋಪ್ಯುರಿನ್‌ನಲ್ಲಿ ಒಂದಿಷ್ಟು ವೈರಸ್‌ವಿರೋಧಿ ಗುಣಗಳಿವೆ ಎಂದು ಕಂಡು ಬಂದಿತ್ತು. ಆರೋಗ್ಯವಂತ ಜೀವಕೋಶಗಳಿಗೆ ಹಾನಿ ಮಾಡದೆ, ವೈರಸ್ ಜೀವಕೋಶಗಳು ವೃದ್ಧಿಯಾಗುವುದನ್ನು ತಡೆಯುವಂಥ ಸಂಯುಕ್ತ ಅವಳಿಗೆ ಬೇಕಿತ್ತು. ತಾನು ತಯಾರಿಸಿದ ಸ್ಯಾಂಪಲ್ ಅನ್ನು ವೈರಸ್ ವಿರೋಧಿ ಪರೀಕ್ಷೆಗಳಿಗಾಗಿ ಇಂಗ್ಲೆಂಡಿಗೆ ಕಳುಹಿಸಿದಾಗ, ಅತ್ತಲಿಂದ ಉದ್ವೇಗದ ಉತ್ತರ ಬಂದಿತು. 'ನಾವು ಕಂಡದ್ದರಲ್ಲ ಅತ್ಯುತ್ತಮವಾದ ಔಷಧ ಇದು. ಇದು ಹರ್ಪಿಸ್ ವೈರಸ್ ವಿರುದ್ಧವಾಗಿಯೂ ಕೆಲಸ ಮಾಡುತ್ತದೆ' ಎಂಬ ಟೆಲಿಗ್ರಾಮ್ ತಲುಪಿತು. ಕ್ಯಾನ್ಸರ್ ರೋಗಿಗಳಲ್ಲಿ, ಅಂಗಗಳ ಕಸಿ ಪಡೆದವರಲ್ಲಿ ಹರ್ಪಿಸ್ ಕಾಣಿಸಿಕೊಂಡರೆ ಅದು ಜೀವಾಪಾಯದ್ದು. ದೇಹದ ರಕ್ಷಣಾ ವ್ಯವಸ್ಥೆಯನ್ನು ಅಡಗಿಸಿಟ್ಟ ಇಂಥಾ ಸಮಯದಲ್ಲಿ, ವೈರಸ್ ಒಳ ಅಂಗಾಂಗಳಿಗೆ, ಚರ್ಮದ ದೊಡ್ಡ ದೊಡ್ಡ ಭಾಗಗಳಿಗೂ ಹರಡಿ ಬಿಡುತ್ತದೆ. ಇದೀಗ ಇಲಿಯನ್ ಮತ್ತು ಆಕೆಯ ತಂಡ ಈ ಔಷಧದ ಮತ್ತಷ್ಟು ಸುಧಾರಣೆಯಲ್ಲಿ ತೊಡಗಿದರು. ಇಲಿಯನ ಈ ಸಂಯುಕ್ತದ ಕಾರ್ಯವಿಧಾನವನ್ನು ಕುರಿತು ಕೆಲಸ ಮಾಡಿದಳು. 'ಅಸಿಕ್ಲೋವೀರ್' ಎಂಬ ಈ ಸಂಯುಕ್ತ ವೈರಸ್‌ಗಳು 'ಆತ್ಮಹತ್ಯೆ' ಮಾಡಿಕೊಳ್ಳುವಂತೆ ಮಾಡುತ್ತಿತ್ತು. ಅಸಿಕ್ಲೋವೀರ್ ವೈರಸ್‌ವಿರೋಧಿ ಸಂಶೋಧನ ರಂಗದಲ್ಲಿ ಮಹತ್ತರ ತಿರುವು ತಂದ ವಿಷಯ. ಯಾರೊಬ್ಬರೂ ಇಂಥಾ ಔಷಧದ ಸಾಧ್ಯತೆಯನ್ನು ಊಹಿಸಿರಲಿಲ್ಲ. ತಟ್ಟನೆ ಇದೀಗ ಈ ರಂಗದಲ್ಲಿ ಎಲ್ಲರೂ ನುಗ್ಗಿ ಕೆಲಸ ಮಾಡುವಂತೆ ಪ್ರೇರೇಪಿಸಿದ ಅತಿ ಪ್ರಮುಖ ಅನ್ವೇಷಣೆ ಅಸಿಕ್ಲೋವೀರ್ ಆಗಿತ್ತು.

1988ರಲ್ಲಿ ಇಲಿಯನ್‌ಗೆ ಜಾರ್ಜ್ ಹಿಚಿಂಗ್ಸ್ ಮತ್ತು ಲಂಡನ್‌ನ ಸರ್ ಜೇಮ್ಸ್ ಬ್ಲಾಕ್ ಅವರೊಡನೆ ನೊಬೆಲ್ ಪ್ರಶಸ್ತಿ ಲಭಿಸಿತು. ಮೊಟ್ಟ ಮೊದಲಿಗೆ ವಾಣಿಜ್ಯ ಔಷಧಿ ಕಾರ್ಖಾನೆಯಲ್ಲಿ ಸಂಶೋಧನೆ ನಡೆಸಿದ ವಿಜ್ಞಾನಿಗಳಿಗೆ ನೊಬೆಲ್ ಪಾರಿತೋಷಕ ದೊರೆತಿತ್ತು. ಎಲಿಯನ್ ಹಾಕಿಕೊಟ್ಟ ಸಂಶೋಧನಾ ಬುನಾದಿಯ ಮೇಲೆ, ಏಡ್ಸ್‌ಗೆ 'ಎ.ಜೆಡ್.ಟಿ.' ಎಂಬ ಅಮೆರಿಕೆಯ ಸರಕಾರದ ಅನುಮತಿ ಪಡೆದ ಏಕಮೇವ ಔಷಧಿಯನ್ನು ಕಂಡು ಹಿಡಿಯಲು ಕೂಡಾ ಸಾಧ್ಯವಾಯಿತು.

★

# ಬಾಲಕಾರ್ಮಿಕರ 'ಅಮ್ಮಾ' - ಶಾಂತಾಸಿನ್ಹಾಗೆ ಮ್ಯಾಗ್ಸೇಸೆ ಪ್ರಶಸ್ತಿ

- ದೇವಿ

ಬಾಲಕಾರ್ಮಿಕ ಪದ್ಧತಿಯನ್ನು ಮೂಲೋಚ್ಚಾಟನೆ ಮಾಡಲು ಕಂಕಣಬದ್ಧರಾಗಿರುವ ಶಾಂತಾ ಸಿನ್ಹಾ ಅವರಿಗೆ ಈ ಬಾರಿ ಮ್ಯಾಗ್ಸೇಸೆ ಪ್ರಶಸ್ತಿಯ ಗೌರವ. ಸಮಾಜದ ಎಲ್ಲ ವರ್ಗದ ಮಕ್ಕಳಿಗೆ ಶಾಲಾ ವಿದ್ಯಾಭ್ಯಾಸ ಕೊಡಿಸಲೇ ಬೇಕು. ಈ ವಿಷಯದಲ್ಲಿ ಪರ್ಯಾಯವೂ ಇಲ್ಲ, ರಾಜಿಯೂ ಇಲ್ಲ ಎಂಬುದು ಅವರ ದೃಢನಿಲುವು. ಇದನ್ನು ಅನೇಕ ಮಂದಿ 'ಆದರ್ಶವಾದ', 'ಪ್ರಾಯೋಗಿಕವಲ್ಲದ' ಅಭಿಮತವೆಂದು ಟೀಕಿಸಿರುವುದುಂಟು. ಅದಕ್ಕೆಲ್ಲ ವಿಚಲಿತರಾಗುವ ಜಾಯಮಾನ ಶಾಂತಾ ಅವರದಲ್ಲ. ಅವರ ಪ್ರಕಾರ ಎಲ್ಲ ಮಕ್ಕಳೂ ಶಾಲೆಗೆ ಹೋಗಲೇಬೇಕು. ಮನೆಯ ಪರಿಸ್ಥಿತಿ ಮಕ್ಕಳನ್ನು ದುಡಿಮೆಗೆ ತಳ್ಳುತ್ತದೆ ಎಂಬ ಎಂದಿನ ವಾದವನ್ನು ಅವರು ಒಪ್ಪಿದರೂ ಅದನ್ನು ಸರಿಪಡಿಸುವ ಬಗ್ಗೆ ಸಮಾಜದ್ದು ಎನ್ನುತ್ತಾರೆ ಅವರು.

ಬಾಲ ಕಾರ್ಮಿಕರ ಸಮಸ್ಯೆ ಭಾರತದಲ್ಲಿ ಹೊಸದೇನೂ ಅಲ್ಲ. 14 ವರ್ಷಕ್ಕಿಂತ ಕೆಳವಯಸ್ಸಿನ ಮಕ್ಕಳಿಗೆಲ್ಲ ಕಡ್ಡಾಯ ಶಿಕ್ಷಣ ನೀಡಬೇಕೆಂದು ಸಂವಿಧಾನ ಹೇಳುತ್ತದೆ. 1986ರಲ್ಲಿ ರಾಜೀವ್‌ಗಾಂಧಿ ಸರ್ಕಾರ ರೂಪಿಸಿದ ಬಾಲಕಾರ್ಮಿಕರ ದುಡಿಮೆ ನಿಷೇಧ ಕಾಯ್ದೆಯ ಅಪಾಯಕಾರಿ ಕೈಗಾರಿಕೆಗಳಲ್ಲಿ ಬಾಲಕಾರ್ಮಿಕರ ನೇಮಕವನ್ನು ನಿಷೇಧಿಸಿತ್ತು. ಬಾಲಕಾರ್ಮಿಕರ ದುಡಿಮೆ ನಿಷೇಧಕ್ಕೆ 1991ರಲ್ಲಿ ನರಸಿಂಹರಾವ್ ಸರ್ಕಾರ ವ್ಯಾಪಕ ಕಾರ್ಯಕ್ರಮಗಳನ್ನು ಪ್ರಕಟಿಸಿದಾಗ ಆನೇಕ ರಾಜ್ಯಗಳು ಅದು ಕಾರ್ಮಿಕ ಇನ್ಸ್‌ಪೆಕ್ಟರ್‌ಗಳ ಕೆಲಸವೆಂದು ಭಾವಿಸಿದ್ದವು. ನರಸಿಂಹರಾವ್ ಸರ್ಕಾರದ ಕ್ರಮಕ್ಕೆ ವಿಶ್ವವಾಣಿಜ್ಯ ಸಂಸ್ಥೆಯ ನಿರ್ದೇಶನ ಕಾರಣವಾಗಿತ್ತೆಂಬುದು ಬೇರೆ ಮಾತು. ಆದರೆ ಸರ್ಕಾರಗಳ ಧೋರಣೆ ಮಾನವೀಯತೆಯಿಂದ ಎಷ್ಟು ದೂರ ಸಂದಿರುತ್ತವೆಂಬುದಕ್ಕೆ ಅದೊಂದು ನಿದರ್ಶನವಷ್ಟೆ. ದುಡಿಯುವ ಮಕ್ಕಳಿಗಾಗಿ ಸರ್ಕಾರಗಳ ಕಾಳಜಿ ಇತ್ತು. ಹಾಗೆಂದೇ ಅವು ರಾತ್ರಿ ಶಾಲೆ ತೆರೆದು ಈ ಮಕ್ಕಳಿಗೆ ಅನೌಪಚಾರಿಕ ಶಿಕ್ಷಣ ನೀಡುವ ದಿಸೆಯತ್ತಲೇ ಯೋಚಿಸಿದವು. ಅಂದರೆ ಮಕ್ಕಳು 'ಹಗಲು ದುಡಿಯಲಿ, ರಾತ್ರಿ ಕಲಿಯಲಿ' ಎಂಬ ಮಂತ್ರ ಅದಾಗಿತ್ತು. ಶಾಂತಾ ಸಿನ್ಹಾ ಸಹಜವಾಗಿ ಇದನ್ನೂ ಒಪ್ಪುವುದಿಲ್ಲ. 'ತನ್ನ ಕುಟುಂಬಕ್ಕೆ ಆಹಾರ ತರುವಂತೆ ಮಕ್ಕಳ ಮೇಲೆ ಒತ್ತಡ ತರುವುದಾದರೂ ಹೇಗೆ? ತನ್ನ ಪ್ರಜೆಗಳಿಗೆ ಆಹಾರ ಭದ್ರತೆ ನೀಡುವುದು ಸರ್ಕಾರದ ಕೆಲಸ. ಹೊಟ್ಟೆ ತುಂಬುವಷ್ಟು ಆಹಾರ ಲಭ್ಯವಿದ್ದರೆ ಯಾವ ತಂದೆ ತಾಯಿಗೂ ಮಕ್ಕಳನ್ನೂ ದುಡಿಯಲು ಕಳುಹಿಸಲು ಖಂಡಿತ ಇಷ್ಟವಿರುವುದಿಲ್ಲ' ಜನರಿಗೆ ದುಡಿಯಲು ಕೆಲಸ, ಹೊಟ್ಟೆಗೆ ಆಹಾರಧಾನ್ಯ ನೀಡುವ ಬದಲು ಸರ್ಕಾರಗಳು ರಾತ್ರಿಶಾಲೆ ತೆರೆಯುವ ಬಗೆಗೆ ಚಿಂತಿಸುವುದು ಮೂರ್ಖತನ. ಹಗಲು ದುಡಿಯುವ ಮಕ್ಕಳಿಗೆ ರಾತ್ರಿ ಕಲಿಯುವ ಉತ್ಸಾಹ ಇರುತ್ತದೆಯೆ ಎಂಬ ಶಾಂತಾ ಅವರ ಪ್ರಶ್ನೆಗೆ ಸರ್ಕಾರಗಳೇ ಉತ್ತರಿಸಬೇಕು.

ಈ ಮಧ್ಯೆ ಶಾಂತಾ ಸಿನ್ಹಾ ಅವರಿಗೆ ಪ್ರಶಸ್ತಿ ಘೋಷಿಸಿದಾಗ ಎಷ್ಟೋ ಜನ ಅವರ ಹೆಸರೇ ಕೇಳಿರಲಿಲ್ಲವೆಂದು ಪ್ರತಿಕ್ರಿಯಿಸಿದ್ದರು. ಆಂಧ್ರ ಪ್ರದೇಶದಲ್ಲಿ ತಮ್ಮದೇ ರೀತಿಯಲ್ಲಿ ಬಾಲಕಾರ್ಮಿಕರನ್ನು ಶಾಲೆಗೆ ಒಯ್ಯುವ ಚಳುವಳಿಯಲ್ಲಿ ಕ್ರಿಯಾಶೀಲವಾಗಿರುವ ಶಾಂತಾ ಸಿನ್ಹಾ ಹೈದ್ರಾಬಾದ್ ವಿಶ್ವವಿದ್ಯಾಲಯದಲ್ಲಿ ರಾಜಕೀಯ ಶಾಸ್ತ್ರ ಪ್ರಾಧ್ಯಾಪಕರು. 'ಆಂಧ್ರಪ್ರದೇಶದಲ್ಲಿ ಮಾವೋವಾದಿ ಚಳುವಳಿ' ಕುರಿತಂತೆ ಜೆ.ಎನ್.ಯು.ಯಿಂದ 1976ರಲ್ಲಿ ಪಿ.ಎಚ್.ಡಿ., ಪಡೆದಿದ್ದಾರೆ. ಅವರ ಪತಿ ಅಜಯ್ ಸಿನ್ಹಾ ತಮ್ಮ ವಿದ್ಯಾರ್ಥಿ ಕಾಲದಿಂದಲೂ ಎಡಪಂಥೀಯ ಧೋರಣೆಯುಳ್ಳವರು. ಅಜಯ್ ಸಿನ್ಹಾ ಅವರ ತಂದೆ ವಿಜಯಕುಮಾರ್ ಸಿನ್ಹಾ ಪ್ರಗತಿಪರ ಧೋರಣೆಯಾಗಿದ್ದವರು. ಭಗತ್‌ಸಿಂಗ್ ಅನುಯಾಯಿ ಕೂಡ. ಶಾಂತಾ ಸಿನ್ಹಾಗೆ ಅವರ ಮನೆ ವಾತಾವರಣ ಅವರ ಚಟುವಟಿಕೆಗಳಿಗೆ ನೆರವು ನೀಡಿದೆ. ಜತೆಗೆ ಅವರ ತಾತಾ ಸ್ವಾತಂತ್ರ್ಯ ಹೋರಾಟಗಾರರು. ಅವರ ಹೆಸರಿನಲ್ಲಿ ಸ್ಥಾಪಿಸಿರುವ ಮಾಮಿಡಿ ಪುಡಿ ವೆಂಟಕರಂಗಯ್ಯ ಪ್ರತಿಷ್ಠಾನವನ್ನು ಬಾಲದುಡಿಮೆ ಮೂಲೋಚ್ಚಾಟನೆಯಲ್ಲಿ ಬದ್ಧವಾಗಿರುವ ಪ್ರಮುಖ ಎನ್.ಜಿ.ಓ ಎಂದು ಐ.ಎಲ್.ಓ. ತನ್ನ ವೆಬ್‌ಸೈಟ್‌ನಲ್ಲಿ ಗುರುತಿಸಿದೆ. ಆಂಧ್ರ ಪ್ರದೇಶದ 88 ಗ್ರಾಮಗಳಲ್ಲಿ ಈ ಸಂಸ್ಥೆ ಬಾಲ ಕಾರ್ಮಿಕರನ್ನು ಸಂಪೂರ್ಣವಾಗಿ ಶಾಲೆಗೆ ತರುವಂತೆ ಮಾಡಿರುವುದನ್ನೂ ಐ.ಎಲ್.ಓ. ಶ್ಲಾಘಿಸಿದೆ. ಇದರ ಬೆನ್ನಹಿಂದೆ ಶಾಂತಾ ಸಿನ್ಹಾ ಅವರ ಶ್ರಮವಿದೆ ಎಂದು ಹೇಳಬೇಕಾಗಿಲ್ಲ.

'ಬಾಲ ದುಡಿಮೆಯನ್ನು ಯಾವುದೇ ರೀತಿಯಲ್ಲಿಯೂ ಕೊಳ್ಳುವುದು ಅನೈತಿಕ ಹಾಗೂ ತಪ್ಪು. ಔಪಚಾರಿಕ ಶಾಲೆಗಳಲ್ಲಿ ಎಲ್ಲ ಮಕ್ಕಳೂ ಕಲಿಯಬೇಕಾದದುದು ಸರಿಯಾದ ವ್ಯವಸ್ಥೆ' ಎಂದು ಇತ್ತೀಚಿನ ಸಂದರ್ಶನವೊಂದರಲ್ಲಿ ಶಾಂತಾ ಹೇಳಿದ್ದಾರೆ. 'ನಾನು ಶ್ರಮಿಕ್ ವಿದ್ಯಾಪೀಠದಲ್ಲಿ ನೋಡಿರುವೆ - ಅವಕಾಶ ಸಿಕ್ಕರೆ ತಮ್ಮ ಮಕ್ಕಳನ್ನೂ ಶಾಲೆಗಳಲ್ಲಿ ನೋಡುವ ತುಡಿತ ತಂದೆ ತಾಯಿಗಳಲ್ಲಿರುತ್ತದೆ. ಅರೆಕಾಲಿಕ ಶಿಕ್ಷಣದ ಸಲಹೆ ಮಕ್ಕಳಿಗೆ ಅದರ ಮೂಲಭೂತ ಹಕ್ಕನ್ನು ವಂಚಿಸಿದಂತೆ.

ಬಾಲದುಡಿಮೆ ಮೂಲೋಚ್ಚಾಟನೆ ಸಾಧ್ಯವೆ? 'ಅದು ಅವರವರ ಧೋರಣೆ ಮೇಲೆ ಅವಲಂಬಿತ. ಬಾಲ ಕಾರ್ಮಿಕರನ್ನೂ ಕಂಡಾಗ ಜನರೇಕೆ ಸಿಟ್ಟಾಗುವುದಿಲ್ಲ? ಪೋಷಕರನ್ನು ದೂಷಿಸಿ ಪ್ರಯೋಜನವಿಲ್ಲ. ದುಡಿಯುವ ಮಕ್ಕಳನ್ನು ತಾಳಿಕೊಂಡಿರುವ ನಾಗರೀಕ ಸಮಾಜವನ್ನು ಪ್ರಶ್ನಿಸಬೇಕಾಗಿದೆ. ಸಮಾಜ ಪ್ರತಿಭಟಿಸಿದರೆ ಅರ್ಧ ಸಮರಗೆದ್ದಂತೆ. ಆಗ ಸಮಾಜವು ಮಾಧ್ಯಮಗಳ ಜತೆಗೂಡಿ ಸರ್ಕಾರದ ಮೇಲೆ ಒತ್ತಡ ತರಬಹುದು'. ಸರ್ಕಾರದ್ದು ಯಾವಾಗಲೂ ಪಲಾಯನವಾದವೇ. ರಾಜಿ ಇಲ್ಲದಂತೆ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಅದರ ಮನವೊಲಿಸಬೇಕಾಗಿದೆ.

ರಾಜಕೀಯ ಇಚ್ಛಾಶಕ್ತಿ ಇರುವ ನಾಯಕತ್ವ, ಕ್ರಿಯಾಶೀಲ ಎನ್.ಜಿ.ಓ. ಹಾಗೂ ಉತ್ಸಾಹ ತುಂಬಿದ ಅಧಿಕಾರವರ್ಗ ಜತೆಗೂಡಿದರೆ ಬಾಲದುಡಿಮೆ ಮೂಲೋಚ್ಚಾಟನೆಗೆ ಇರುವ ಅಡೆತಡೆಯನ್ನು ಸುಲಭವಾಗಿ ದಾಟಬಹುದೆಂಬುದು ಶಾಂತಾ ಅವರ ಅಚಲ ವಿಶ್ವಾಸ. ಅವರಿಗೊಂದು ಕನಸಿದೆ - 'ಭಾರತದಲ್ಲಿ ಒಂದೇ ಒಂದು ಬಾಲಕಾರ್ಮಿಕರಿಲ್ಲದ ದಿನವನ್ನು ನೋಡಬೇಕು?' ★

# ಗ್ರಾಮೀಣಾಭಿವೃದ್ಧಿಯಲ್ಲಿ ಕರ್ನಾಟಕದ ಮುನ್ನಡೆ

## ರಾಷ್ಟ್ರದ ಘನತೆ, ಗೌರವ, ಕೀರ್ತಿ ಕಾಪಾಡಲು ದೃಢ ಸಂಕಲ್ಪ ಮಾಡೋಣ

**ಗ್ರಾಮೀಣಾಭಿವೃದ್ಧಿ :**

☞ ವಿಶೇಷವಾಗಿ ಉತ್ತರ ಭಾಗದ ಜಿಲ್ಲೆಗಳಲ್ಲಿ ಹೆಚ್ಚು ಪ್ರಯೋಗಾಲಯಗಳನ್ನು ಸ್ಥಾಪಿಸಿ ರೋಗ ಪತ್ತೆ ಹಚ್ಚುವ ಸೌಕರ್ಯ ವೃದ್ಧಿಗೆ ಯೋಜನೆ.

☞ ಪ್ರಮುಖ ಮಾರುಕಟ್ಟೆಗಳಲ್ಲಿ ಆನ್‌ಲೈನ್ ಬೆಲೆ ಮಾಹಿತಿ ವ್ಯವಸ್ಥೆಯ ಅನುಷ್ಠಾನ.

☞ ಗ್ರಾಮೀಣ ಪ್ರದೇಶಗಳಲ್ಲಿ ಜಾನುವಾರುಗಳಿಗೆ ಕೃತಕ ಗರ್ಭಧಾರಣೆಯನ್ನು ಹಂತ ಹಂತವಾಗಿ ಖಾಸಗೀಕರಣಗೊಳಿಸಲು ಕ್ರಮ.

☞ ಮಾರುಕಟ್ಟೆ ಸಮಿತಿಗಳಿಗೆ ಇಂಟರ್‌ನೆಟ್ ಸೌಲಭ್ಯಗಳ ಪೂರೈಕೆ

☞ ಬಡತನ ರೇಖೆಗಿಂತ ಕಡಿಮೆ ಇರುವ ಕುಟುಂಬಗಳಿಗೆ ಸಾರ್ವಜನಿಕ ವಿತರಣಾ ವ್ಯವಸ್ಥೆಯ ಸೌಲಭ್ಯದ ಖಾತರಿಗಾಗಿ ಮನೆ ಮನೆ ಸಮೀಕ್ಷಾ ಕಾರ್ಯ.

☞ ಪಡಿತರ ಚೀಟಿಗಳ ಗಣಕೀಕರಣ

☞ ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮದ ಮೂಲಕ ಗ್ರಾಮೀಣ ಮತ್ತು ನಗರ ಪ್ರದೇಶದ ವಸತಿಹೀನ ಬಡವರಿಗೆ ಹನ್ನೊಂದು ಲಕ್ಷ ಮನೆಗಳ ನಿರ್ಮಾಣಕ್ಕೆ ಬೃಹತ್ ಯೋಜನೆ.

☞ ಕೊಳಚೆ ಪ್ರದೇಶದ ಅಭಿವೃದ್ಧಿಗಾಗಿ ನಿರ್ಮಲ ಜ್ಯೋತಿ ಕಾರ್ಯಕ್ರಮದ ಅನುಷ್ಠಾನ

**ಕೃಷಿ :**

☞ ಪ್ರಕೃತಿ ವಿಕೋಪದ ಪರಿಹಾರಕ್ಕೆ ರೂ. 103 ಕೋಟಿಗಳ ಬಿಡುಗಡೆ

☞ ಬರಗಾಲ ಪೀಡಿತ ಪ್ರದೇಶಗಳಿಗೆ ಆಹಾರ ಧಾನ್ಯಗಳ ಹಂಚಿಕೆ.

☞ ಕೃಷಿ ಆಯೋಗದ ಶಿಫಾರಸ್ಸುಗಳ ಜಾರಿ 745 ಹೋಬಳಿಗಳ ಪೈಕಿ 741 ಹೋಬಳಿಗಳಲ್ಲಿ ರೈತ ಸಂಪರ್ಕ ಕೇಂದ್ರಗಳ ಸ್ಥಾಪನೆ.

☞ ಕೃಷಿ ಪದ್ಧತಿ ಪ್ಯಾಕೇಜ್ ವಿವರಗಳು ಪರಿಕರ ದಾಸ್ತಾನು ಸ್ಥಿತಿ ಮತ್ತು ತಾಂತ್ರಿಕ ವಿವರಗಳನ್ನು ಒದಗಿಸುವ ವೆಬ್‌ಸೈಟ್ ಸ್ಥಾಪನೆ.

☞ ತೋಟಗಾರಿಕೆ ಅಭಿವೃದ್ಧಿಗೆ ವಿಶೇಷ ಒತ್ತು.

☞ ಮಾಹಿತಿ ಬ್ಯಾಂಕ್ ಮೂಲಕ ಮಾಹಿತಿ ಒದಗಿಸಲು ಏಕಗವಾಕ್ಷಿ ವಿಧಾನ ಅನುಸಸರಣೆ.

**ಸಾರಿಗೆ :**

★ 7,000 ಕಿ.ಮೀ. ಉದ್ದದ ರಾಜ್ಯ ಹೆದ್ದಾರಿಗಳ ನಿರ್ವಹಣಾ ಕಾರ್ಯಕ್ರಮಕ್ಕೆ

★ ನಬಾರ್ಡ್ ನೆರವಿನಿಂದ ರೂ. 320 ಕೋಟಿ ವೆಚ್ಚದಲ್ಲಿ 4706 ಕಿ.ಮೀ ಗ್ರಾಮೀಣ ರಸ್ತೆಗಳ ಸುಧಾರಣೆ, 100 ಸೇತುವೆಗಳ ನಿರ್ಮಾಣ.

- ಕರ್ನಾಟಕ ವಾರ್ತೆ

# ವೇಶ್ಯೆಯರು ಲೈಂಗಿಕ ಕಾರ್ಯಕರ್ತರೇ?

**- ಎಂ.ಕೆ. ಪಾಂಡೆ**

ಸಮಾಜದಲ್ಲಿ ವೇಶ್ಯಾಗಿರಿಯು ಒಂದು ಅವಶ್ಯಕವಾದ ಚಟುವಟಿಕೆ ಎಂಬುದನ್ನು ಸಮರ್ಥಿಸುವ ಜನ ಅದೊಂದು ಪುರಾತನ ವೃತ್ತಿ ಎಂದೆಲ್ಲ ವೈಭವೀಕರಿಸುತ್ತಾರೆ. ವೇಶ್ಯಾವೃತ್ತಿಯು ಯಾವುದೋ ಓಬೀರಾಯನ ಕಾಲದಿಂದ ಅಸ್ತಿತ್ವದಲ್ಲಿದೆ ಎಂಬುದೇನೋ ನಿಸ್ಸಂದೇಹವೇ. ಆದರೆ ಅದು ಈ ಪುರುಷ ಪ್ರಾಧಾನ್ಯ ಸಮಾಜದಲ್ಲಿ ಮಹಿಳೆಯರ ಗುಲಾಮಗಿರಿಗೆ ಸಂಬಂಧಿಸಿದಂತಹ ಒಂದು ವ್ಯವಸ್ಥೆ.

ಜಗತ್ತಿನ ಅನೇಕ ರಾಷ್ಟ್ರಗಳು ವೇಶ್ಯಾಗಿರಿಯನ್ನು ಕಾನೂನುಬದ್ಧವಾಗಿಸಿವೆ. ಪುಷ್ಪಗೃಹಗಳೆಂದೇ ಕರೆಯಲ್ಪಡುವ ವೇಶ್ಯಾಗಿರಿ ನಡೆಯುವ ಸ್ಥಳಗಳಿಗೆ ಪರವಾನಗಿ ನೀಡತಕ್ಕ ಕಾನೂನುಗಳನ್ನು ಸಹ ಜಾರಿಗೊಳಿಸಲಾಗಿದೆ. ಈ ಗೃಹಗಳಲ್ಲಿ ವೇಶ್ಯೆಯರಿಗೆ ಯಾವುದೇ ಲೈಂಗಿಕ ರೋಗಗಳಿಲ್ಲವೆಂಬುದನ್ನು ಖಚಿತಪಡಿಸಿಕೊಳ್ಳಲು ಅವರ ವೈದ್ಯಕೀಯ ತಪಾಸಣೆ ನಡೆಸಲಾಗುತ್ತದೆ. ಇವೆಲ್ಲವೂ ವಾಸ್ತವದಲ್ಲಿ ಈ ಪುಷ್ಪಗೃಹಗಳಿಗೆ ಭೇಟಿ ನೀಡುವ ಪುರುಷರ ಹಿತಾಸಕ್ತಿಯ ರಕ್ಷಣೆಗೆ. ಒಬ್ಬ ವೇಶ್ಯೆಗೆ ಯಾವುದೇ ರೋಗಗಳಿಲ್ಲ ಎಂದು ಖಚಿತಪಡಿಸುವಂತಹ ಪ್ರಮಾಣಪತ್ರಗಳನ್ನು ನೀಡುವ ಪುರುಷರ ಹಿತಾಸಕ್ತಿಯ ರಕ್ಷಣೆಗೆ. ಒಬ್ಬ ವೇಶ್ಯೆಗೆ ಯಾವುದೇ ರೋಗಗಳಿಲ್ಲ ಎಂದು ಖಚಿತಪಡಿಸುವಂತಹ ಪ್ರಮಾಣಪತ್ರವನ್ನು ನೀಡುವ ಸೌಲಭ್ಯ ಸಹ ಇಲ್ಲಿ ಉಂಟು.

ಅನೇಕ ಲೇಖಕರು ವೇಶ್ಯಾಗಿರಿಯು ಒಂದು ಕಳಂಕ ಎಂದು ಒಪ್ಪಿಕೊಳ್ಳುತ್ತಾರೆ. ಆದರೆ ಇದು ಸಾಮಾಜಿಕ ವ್ಯವಸ್ಥೆಯ ಒಂದು ಅವಶ್ಯಕ ಅಂಗವಾದ್ದರಿಂದ ಅದನ್ನು ಅವಶ್ಯಕ ಕಳಂಕವೆಂದು ಪರಿಗಣಿಸುತ್ತಾರೆ. ಈ ವ್ಯವಸ್ಥೆಯು ಮುಂದುವರಿಯುವ ಬಗ್ಗೆ ಸಂತರಿಂದ ವಿಜ್ಞಾನಿಗಳವರೆಗೆ - ಅವರವರ ಭಾವಕ್ಕೆ ತಕ್ಕಂತೆ ಹೇಳಿರುವ ನೂರಾರು ನುಡಿಮುತ್ತುಗಳು ಲಭ್ಯವಿವೆ.

ಈ ಎಲ್ಲ ಲೇಖಕರು ಓರ್ವ ಮಹಿಳೆಗೆ ಮಕ್ಕಳನ್ನು ಹೊಂದಿ, ಸಾಕಿ ಸಲಹಲು ಮತ್ತು ಒಂದು ಒಳ್ಳೆಯ ಗೌರವಯುತ ಕುಟುಂಬಜೀವನವನ್ನು ಹೊಂದಲು ಇರುವ ನ್ಯಾಯಯುತ ಆಕಾಂಕ್ಷೆಗಳಿಗೆ 'ಕೂಡದು' ಎನ್ನುತ್ತಾರೆ. ವೇಶ್ಯೆಯರು ಕುಟುಂಬ ಜೀವನವನ್ನು ಮರೆಯಬೇಕು; ಲೈಂಗಿಕ ತೃಪ್ತಿಗಾಗಿ ಹಣ ತೆರಲು ಸಿದ್ಧವಿರುವ ಯಾರೊಂದಿಗಾದರೂ ಸರಿ, ಲೈಂಗಿಕ ಸಂಪರ್ಕ ಇಟ್ಟುಕೊಳ್ಳಬೇಕು. ಆ ಮನುಷ್ಯ ಕುರೂಪಿಯೋ, ಕೊಳಕನೋ ಆಗಿದ್ದರೂ ಸರಿಯೇ; ಆತನಿಂದ ಹೆಂಡದ ಅಥವಾ ತಂಬಾಕಿನ ವಾಸನೆ ಹೊಡೆಯುತ್ತಿದ್ದರೂ ಸರಿಯೇ - ಓರ್ವ ವೇಶ್ಯೆ ಒತ್ತಾಯಪೂರ್ವಕವಾಗಿ ಆತನೊಂದಿಗೆ ಲೈಂಗಿಕ ಸಂಬಂಧ ಹೊಂದಲೇಬೇಕು. ಹೀಗೆ ಬಲವಂತಪೂರ್ವಕವಾಗಿ ತನ್ನ ಲೈಂಗಿಕ ಸಂಗಾತಿಯಾಗಿರುವವಳ ಪ್ರತಿಕ್ರಿಯೆಯ ಬಗ್ಗೆ ಯಾವುದೇ ರೀತಿಯ ಭಾವನೆಗಳೂ ಇರದಂತಹ ಲೈಂಗಿಕ ಸಂಗಾತಿಯನ್ನು ಈ ವೇಶ್ಯೆಯು ಸಹಿಸಿಕೊಳ್ಳಬೇಕು - ತನ್ನಲ್ಲಿನ ತಳಮಳದ ಭಾವನೆಗಳನ್ನು ಕೊಂದುಹಾಕಿ, ಸಹಿಸಿಕೊಳ್ಳಬೇಕು. ವೇಶ್ಯಾವ್ಯವಸ್ಥೆಗಳನ್ನು ವೈಭವೀಕರಿಸುವ ಜನರೆಂದಿಗೂ ವೇಶ್ಯೆಯರ ಅವಮಾನಕರ ಜೀವನವನ್ನು ಅರ್ಥಮಾಡಿಕೊಂಡೇ ಇಲ್ಲ.

ಬಂಡವಾಳಶಾಹಿ ವರ್ಗದ ಜನರ ಮಹಿಳೆಯರನ್ನು ಅಗ್ಗದ ದುಡಿಮೆಗೆ ಉಪಯೋಗಿಸಿಕೊಳ್ಳುತ್ತಾರೆ. ಇದರಿಂದ ಆ ಮಹಿಳೆಯರಿಗೆ ಸಂಸಾರವನ್ನು ತೂಗಿಸುವುದೇ ಕಷ್ಟ. ಸಂಸಾರದ ಉಳಿವಿಗಾಗಿ ಅನೇಕರಿಗೆ ವೇಶ್ಯಾವೃತ್ತಿಯಲ್ಲಿ ತೊಡಗುವುದು ಅನಿವಾರ್ಯವಾಗುತ್ತದೆ. ಮನೆಯಾತನು ಅಲ್ಪಸಂಬಳಕ್ಕಾಗಿ ದುಡಿಯುವ ತಮ್ಮ ಮನೆಗೆಲಸದವರ ಅಸಹಾಯಕತೆಯನ್ನು ದುರುಪಯೋಗಪಡಿಸಿಕೊಳ್ಳುವಂತಹ ಎಷ್ಟು ಪ್ರಕರಣಗಳು ತಾನೆ ಗಮನಕ್ಕೆ ಬಂದಿಲ್ಲ!

ವೇಶ್ಯಾವೃತ್ತಿ ಎನ್ನುವುದು ಒಬ್ಬ ಮಹಿಳೆಗೆ ಜೀವನೋಪಾಯಕ್ಕಾಗಿ ಯಾವುದೇ ಮಾರ್ಗವಿಲ್ಲದೇ ಹೋದಾಗ ಕಂಡುಬರುವ ಕೊನೆಯ ಉಪಾಯ. ಆ ವೃತ್ತಿ ಆಕೆಯ ಆಯ್ಕೆಯದ್ದೇನಲ್ಲ; ಆಕೆಯ ಮೇಲೆ ಹೇರಲ್ಪಟ್ಟದ್ದು. ಈ ರೀತಿಯ ಪುರುಷರ ಅನೈತಿಕ ವಾಸನೆಗಳಿಗೆ ಅವಳು ಈಡಾಗಬೇಕು ಮತ್ತು ಅವಮಾನಕರ ಹಾಗೂ ಹೀನಾಯಯುತ ಜೀವನವನ್ನು ಸಾಗಿಸಬೇಕು. ಇಂತಹ ಸಂದರ್ಭಗಳಲ್ಲಿ ವೇಶ್ಯಾಗಿರಿಯನ್ನು ಒಂದು ವೃತ್ತಿ ಎಂದು ವಿಶಿಷ್ಟಗೊಳಿಸುವುದೆಂದರೆ ರಾಷ್ಟ್ರದ ಅರ್ಥರಂಗದ ಅಭಿವೃದ್ಧಿಯ ವಿಷಯದಲ್ಲಿ ಮಹಿಳೆಯರಿಗೆ ಸಮಾನಾವಕಾಶಗಳನ್ನು ಖಚಿತವಾಗಿ ಕಲ್ಪಿಸುವ ನಿಟ್ಟಿನಿಂದ ಮಹಿಳೆಯರ ಸಮಸ್ಯೆಗಳತ್ತ ನೋಡಲು ನಿರಾಕರಣೆ ಎಂದೇ ಅರ್ಥ. ಆಗಸ್ಟ್ ಬೆಬೆಲ್ ತನ್ನ ಪ್ರಖ್ಯಾತ ಪುಸ್ತಕ Woman

- Past, Present and Future ನಲ್ಲಿ ಹೇಳುತ್ತಾನೆ - ಗುಲಾಮಗಿರಿಯನ್ನು ಸವಿದ ಮೊದಲ ಜೀವಿಯೆಂದರೆ ಮಹಿಳೆಯೇ. ಗುಲಾಮಗಿರಿ ವ್ಯವಸ್ಥೆ ಜಾರಿಗೆ ಬರುವ ಮುಂಚೆಯೇ ಮಹಿಳೆ ಗುಲಾಮಳಾಗಿದ್ದಳು.

ಜಗತ್ತಿನಲ್ಲಿ ಗುಲಾಮಗಿರಿಯನ್ನು ತೊಡೆದು ಹಾಕಿದ ನಂತರವೂ ಮಹಿಳೆಯರ ಗುಲಾಮಗಿರಿ ಮುಂದುವರಿಯಿತು. ಇನಾಮುದಾರಿ ಮತ್ತು ಬಂಡವಾಳಶಾಹಿ ಪದ್ಧತಿಯಲ್ಲಿಯೂ ಮಹಿಳೆಯರ ಗುಲಾಮಗಿರಿ ಮುಂದುವರಿದಿದೆ. ಪುರುಷರೊಂದಿಗೆ ಸಮಾನತೆಯ ಹಕ್ಕನ್ನು ಅವರಿಗೆ ನಿರಾಕರಿಸುತ್ತಲೇ ಬರಲಾಗಿದೆ. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಮುಂದುವರಿದುಕೊಂಡೇ ಬಂದಿರುವ ವೇಶ್ಯಾಗಿರಿಯು ಒಬ್ಬ ಮಹಿಳೆಗೆ ಸಮಾನತೆಯ ಹಕ್ಕು ಅಥವಾ ಒಮದು ಗೌರವಯತ ಜೀವನದ ಹಕ್ಕನ್ನು ನಿರಾಕರಿಸುವ ಪುರುಷರ ಧೋರಣೆ ಮುಂದುವರಿದುಕೊಂಡು ಬಂದಿರುವುದನ್ನು ಸೂಚಿಸುತ್ತದೆ.

ಬಹಳಷ್ಟು ಮಂದಿ ವೇಶ್ಯೆಯರು ಬಡ ಕೃಷಿ, ದಲಿತ, ಜನಾಂಗ ಮತ್ತು ದುಡಿಮೆಯ ವರ್ಗಕ್ಕೆ ಸೇರಿದ ಕುಟುಂಬಗಳಿಗೆ ಸೇರಿದವರಾಗಿರುತ್ತಾರೆ ಎಂಬುದು ತಿಳಿದಿರುವ ಸತ್ಯಸಂಗತಿಯೇ. ಆದರೆ, ಕೆಲವು ಸಾಮಾಜಿಕ ಕಾರ್ಯಕರ್ತರು, ಸ್ವಯಂ ಸೇವಾ ಸಂಸ್ಥೆಗಳು ಮತ್ತು ಮಹಿಳೆ ಸಂಸ್ಥೆಗಳು ಅವರನ್ನು ಲೈಂಗಿಕ ಕಾರ್ಯಕರ್ತರೆಂದು ಕರೆಯುವುದು ಬಂಡವಾಳಶಾಹಿ ವ್ಯವಸ್ಥೆಯಲ್ಲಿ ವೇಶ್ಯಾಗಿರಿಯನ್ನು ಕಾನೂನುಬದ್ಧವಾಗಿಸುವ ದಿಕ್ಕಿನಲ್ಲಿ ಒಂದು ಪ್ರಯತ್ನವಾಗುತ್ತದೆ.

ಅತಿಯಾದ ಲೈಂಗಿಕ ಚಟುವಟಿಕೆಯು ಓರ್ವ ವೇಶ್ಯೆಯ ಆರೋಗ್ಯವನ್ನು ಹಾಳುಗೆಡವುತ್ತದೆ. ಆಕೆ ಎಳೆಯ ವಯಸ್ಸಿನಲ್ಲಿಯೇ ಸಾಯಲೂ ಬಹುದೆಂದು ಅಧ್ಯಯನಗಳು ತಿಳಿಸಿವೆ. ಇದೂ ಒಂದು ಜೀವನ. ಇಲ್ಲಿ ವರ್ತನೆಗಳಿಗೆ -ನಡವಳಿಕೆಗಳಿಗೆ ನಿಯಮಗಳಿಲ್ಲ, ನಿಬಂಧನೆಗಳಿಲ್ಲ. ಓರ್ವ ವೇಶ್ಯೆಗೆ ಲೈಂಗಿಕ ಚಟುವಟಿಕೆ ಎನ್ನುವುದು ಒಂದು ರಂಜನೀಯ ಚಟುವಟಿಕೆಯಲ್ಲ, ಅದು ಅವಳಿಗೆ ಜೀವನೋಪಾಯ. ಅವಳ ಅಸಹಾಯಕತೆಗೆ ದುಡಿಮೆ ಎಂಬ ಹಣೆಪಟ್ಟಿ ಹಚ್ಚುವುದು, 'ದುಡಿಮೆ'ಯ ಪರಿಕಲ್ಪನೆಗೇ ಮಾಡುವ ಅಪಚಾರ ಹಾಗೂ ಇದನ್ನು ಮಹಿಳೆಯರು ಮಾಡುವ ದುಡಿಮೆ ಎಂದು ವಿವೇಚನೆ ಇರುವ ಯಾವುದೇ ಟ್ರೇಡ್ ಯೂನಿಯನ್ ಒಪ್ಪಿಕೊಳ್ಳಲಾರದು.

ಇಂದಿನ ಸಮಾಜವು ಮಹಿಳೆಯರಿಗೆ ಸಮಾನ ಉದ್ಯೋಗಾವಕಾಶಗಳು ಮತ್ತು ಕೌಶಲ್ಯಗಳನ್ನು ಹೆಚ್ಚಿಸಿಕೊಳ್ಳುವ ಹಕ್ಕನ್ನು ನಿರಾಕರಿಸುತ್ತದೆ. ಪುರುಷರ ಜೊತೆ ಜೊತೆಗೆ ಮಹಿಳೆಯರು ಸಮಾಜದ ಉತ್ಪಾದಕ ದಳಗಳ ಅಭಿವೃದ್ಧಿಗೆ ದುಡಿಯಬಹುದು, ಆದರೆ ಅವರಿಗೆ ಸಮಾನವಾದಂತಹ ಅವಕಾಶಗಳು ದೊರೆಯವು. ನಮ್ಮ ಔದ್ಯೋಗಿಕ ಸಂಸ್ಥೆಗಳಲ್ಲಿ ಬಹಳಷ್ಟು ಮಂದಿ ಮಹಿಳೆಯರು ಕೆಳ ಹುದ್ದೆಗಳಲ್ಲಿಯೇ ಇದ್ದಾರೆ. ಮೇಲಿನ ಹುದ್ದೆಗಳನ್ನು ಅಲಂಕರಿಸಿರುವವರ ಪ್ರಮಾಣ ಕಡಿಮೆಯಾಗುತ್ತಲಿದೆ. ಅಸಂಖ್ಯಾತ ಮಹಿಳೆಯರಿಗೆ ಉದ್ಯೋಗರಂಗಕ್ಕೆ ಕಾಲಿಡಲು ಅವಕಾಶವೇ ಸಿಗುವುದಿಲ್ಲ. ಈ ಅವಕಾಶವಂಚನೆಯೇ ಅವರನ್ನು ವೇಶ್ಯಾಗಿರಿಯತ್ತ ನೂಕುತ್ತದೆ. ವಾಸ್ತವದಲ್ಲಿ, ಸಾಮಾಜಿಕ ಪರಿಸ್ಥಿತಿಗಳೇ ಬಡ ಮಹಿಳೆಯರು ಕೇವಲ ಉಳಿವಿಗಾಗಿ ಇಂತಹ ಜೀವನವನ್ನು ನಡೆಸಲು ಕಾರಣವಾಗುತ್ತವೆ. ಆದ್ದರಿಂದ ಅವರನ್ನು ಲೈಂಗಿಕ ಕಾರ್ಯಕರ್ತರೆಂದು ಕರೆಯುವುದು ಹಾಸ್ಯಾಸ್ಪದ.

ವೇಶ್ಯೆಯರ ಪರಿಸ್ಥಿತಿಯನ್ನು ಸುಧಾರಿಸಲು ಅಥವಾ ಅವರನ್ನು ಪೋಲಿಸರು - ದಳ್ಳಾಲಿಗಳ ಸುಲಿಗೆಯಿಂದ ಮತ್ತು ಸುಳ್ಳು ಭರವಸೆ ಕೊಟ್ಟು ಅವರನ್ನು ನೇಮಕ ಮಾಡಿಕೊಳ್ಳುವ ಏಜೆಂಟರುಗಳಿಂದ ತಪ್ಪಿಸಲು ಸಾಮಾಜಿಕ ಕಾರ್ಯಕರ್ತರು ನಡೆಸುವ ಪ್ರತಿಯೊಂದು ಪ್ರಯತ್ನವೂ ಸ್ವಾಗತಾರ್ಹವೇ. ಆದರೆ ಈ ವ್ಯವಸ್ಥೆಯನ್ನು ಒಂದು ವೃತ್ತಿ ಎಂದು ಸಮರ್ಥಿಸುವ ಪ್ರಯತ್ನ ಮಾತ್ರ ಸ್ತ್ರೀತ್ವಕ್ಕೆ ಮತ್ತು ಸ್ತ್ರೀಯರ ಆತ್ಮ ಗೌರವಕ್ಕೆ ಎಸಗುವ ಒಂದು ಅಪಚಾರ.

ಇಂದಿನ ಸಮಾಜದಲ್ಲಿ ಹೆಣ್ಣು ಮಗುವಿನ ನಿಂದನೆ ಹೆಚ್ಚುತ್ತಿದೆ. ಲೈಂಗಿಕ ಪ್ರವಾಸೋದ್ಯಮ ಎಂದೇ ಕರೆಯಲಾಗುತ್ತಿರುವ ಪ್ರವೃತ್ತಿಯಲ್ಲಿ ಬಡಜನರ ಮಕ್ಕಳನ್ನು ಉಪಯೋಗಿಸಿಕೊಳ್ಳಲಾಗುತ್ತದೆ. ಸಾಲದೇ ಬರುವ ಕುಟುಂಬದ ಆದಾಯಕ್ಕೆ ಹೆಚ್ಚುವರಿ ಹಣ ಗಳಿಸಿಕೊಡಲು ಅವರ ಮೇಲೆ ನಿರ್ಬಂಧ ಹೇರಲಾಗುತ್ತದೆ. ಭಾರತದಲ್ಲಿ ಬಾಲವೇಶ್ಯೆಯರು ಹೆಚ್ಚುತ್ತಿದ್ದಾರೆ. ಆದರೆ ಸರ್ಕಾರ ಇದರ ಬಗ್ಗೆ ಧೃತರಾಷ್ಟ್ರನಾಗಿ ಕುಳಿತಿದೆ. ಅಭಿವೃದ್ಧಿಶೀಲ ದೇಶಕ್ಕೆ ಇದು ವಿದೇಶೀ ವಿನಿಮಯ ತರುವ ಚಟುವಟಿಕೆಯಲ್ಲವೆ!? ಈಗಾಗಲೇ ಕೆಲವರು ಯತ್ನಿಸುತ್ತಿರುವಂತೆ, ಬಾಲ ವೇಶ್ಯೆಯರನ್ನು ಬಾಲ ಲೈಂಗಿಕ ದುಡಿಮೆಯವರು ಎಂದು ಕರೆಯುವುದು ತೀರಾ ಅಸಂಬದ್ಧ. ದುರಾದೃಷ್ಟದಿಂದ, ಬಾಲಕಿಯರನ್ನು ದುರುಪಯೋಗ ಪಡಿಸಿಕೊಳ್ಳುವುದರ

ವಿರುದ್ಧ ನಮ್ಮಲ್ಲಿ ಸಾಮಾಜಿಕ ತಿಳುವಳಿಕೆ ಇನ್ನೂ ಸರಿಯಾಗಿ ಆಗಿಲ್ಲ, ಇದರಿಂದಾಗಿಯೇ ಈ ವ್ಯವಸ್ಥೆ ಉದ್ಧಾರವಾಗುತ್ತಿದೆ.

ಭಾರತದಾದ್ಯಂತ ಮಹಿಳೆಯರ ನಿರುದ್ಯೋಗವೂ ಹೆಚ್ಚುತ್ತಿರುವಂತೆಯೇ, ಅವರಿಗೆ ನೌಕರಿ ಹಾಗೂ ಇನ್ನಿತರ ಅವಕಾಶಗಳನ್ನು ಕಲ್ಪಿಸುವ ನೆಪದಲ್ಲಿ ಮಹಿಳೆಯರ ಸಾಗಾಣಿಕೆಯೂ ವ್ಯಾಪಕವಾಗಿ ನಡೆದಿದೆ. ಸುಳ್ಳು ಭರವಸೆಗಳನ್ನು ನೀಡಿ ಅನೇಕರನ್ನು ದೇಶದಾಚೆಗೂ ಒಯ್ದಿದ್ದಾರೆ, ಆದರೆ ಕೊನೆಗೆ ಅವರನ್ನು ಅವ್ಯವಹಾರಕ್ಕೆ ಉಪಯೋಗಿಸಿಕೊಂಡಿದ್ದಾರೆ. ಈ ಮಹಿಳೆಯರನ್ನು ಲೈಂಗಿಕ ಕಾರ್ಮಿಕರು ಎಂದೂ ಹಾಗೂ ಇಂತಹ ಪ್ರಸಂಗಗಳನ್ನು ಇವರಿಗೆ ದೊರೆತ ಉದ್ಯೋಗಾವಕಾಶಗಳು ಎಂದು ಪರಿಗಣಿಸಲಾಗುವುದರಿಂದ ಈ ನತದೃಷ್ಟ ಮಹಿಳೆಯರ ರಕ್ಷಣೆಗೆ ಸರ್ಕಾರವು ಯಾವುದೇ ರೀತಿಯ ಕ್ರಮ ತೆಗೆದುಕೊಳ್ಳುತ್ತಿಲ್ಲ. ಬಂಡವಾಳಶಾಹಿ ವ್ಯವಸ್ಥೆಯ ನಿರ್ದಯತೆಯು ಈ ಮಹಿಳಾ ವಿರೋಧಿ ಧೋರಣೆಯಲ್ಲಿ ಸ್ಪಷ್ಟವಾಗಿ - ಸ್ವಚ್ಛವಾಗಿ ಪ್ರತಿಫಲಿಸುತ್ತದೆ.

'ಕಾಮತೃಪ್ತಿಗಾಗಿ ಆಗುವ ಮಹಿಳೆಯರ ಈ ಸರಬರಾಜು ಬೇಡಿಕೆಗಿಂತ ಅಧಿಕವಾದ ಗತಿಯಲ್ಲಿ ಇದೆಯಂತೆ' - ಹೀಗೆಂದು ಆಗಸ್ಟ್ ಬೆಬೆಲ್ ಹೇಳುತ್ತಾರೆ. '...ಈ ದೇಹವ್ಯಾಪಾರವು ಬೃಹತ್ ಆಯಾಮಗಳನ್ನು ಮುಟ್ಟಿದೆ. ಈ ವ್ಯಾಪಾರದಲ್ಲಿ ಎಲ್ಲರೂ ಇದ್ದಾರೆ - ದಳ್ಳಾಳಿಗಳು, ಕರೆದೊಯ್ಯುವವರು (ಪುರುಷರೂ ಇದ್ದಾರೆ - ಸ್ತ್ರೀಯರೂ ಇದ್ದಾರೆ). ಅವರಿಗೆ ಈ ಮಹಿಳೆಯರ ಬಗ್ಗೆ ಯಾವುದೇ ಇತರ ಮಾರಾಟದ ಸರಕಿನ ಬಗ್ಗೆ ಇರುವಂತಹದ್ದೇ ಭಾವ - ಅಸಡ್ಡೆ, ಕ್ರೂರ ನಿರ್ದಯತೆ. ಗಿರಾಕಿಗಳ ಅಭಿರುಚಿ ಮತ್ತು ಬೇಡಿಕೆಗಳಿಗೆ ಅನುಗುಣವಾಗಿ ಮಹಿಳೆಯರನ್ನು ವರ್ಗೀಕರಿಸಿ, ಆಯಾಯ ಸ್ಥಳಗಳಿಗೆ ಕಳಿಸಲಾಗುತ್ತದೆ.

ಜರ್ಮನಿಯಲ್ಲಿ ಹತ್ತೊಂಬನೆಯ ಶತಮಾನದಲ್ಲಿ ಇದ್ದಂತಹ ಪರಿಸ್ಥಿತಿಯನ್ನು ತಮ್ಮ ಪುಸ್ತಕದಲ್ಲಿ ಬೆಬೆಲ್ ವಿವರಿಸುತ್ತಾರೆ. ಆ ವಿವರಗಳು ಇಂದಿಗೂ ಪ್ರಸ್ತುತವೇ. ವೇಶ್ಯೆಯರು ಲೈಂಗಿಕ ಕಾರ್ಮಿಕರಲ್ಲ ಆದರೆ ಬಂಡವಾಳಶಾಹಿಗಳ ಮಾರುಕಟ್ಟೆಯಲ್ಲಿರುವ ಇತರ ಯಾವುದೇ ವಸ್ತುವಿನಂತೆ ವೇಶ್ಯೆಯರ ದೇಹವನ್ನು ಒಂದು ಸರಕನ್ನಾಗಿ ಪರಿವರ್ತಿಸಲಾಗಿದೆ ಎಂಬ ಅಂಶವನ್ನು ಬೆಬೆಲ್ ಎತ್ತಿ ತೋರಿಸುತ್ತಾರೆ.

ಈ ಪರಿಸ್ಥಿತಿಗಳಲ್ಲಿ ವೇಶ್ಯೆಯರನ್ನು ಲೈಂಗಿಕ ಕಾರ್ಯಕರ್ತರು ಎಂದು ಕರೆಯುವುದು ಸರ್ವಥಾ ತಪ್ಪು. ಈ ಪದವನ್ನು ಉಪಯೋಗಿಸುವವರು ಸಮಾಜವು ಅನ್ಯಾಯವಾಗಿ ಮಹಿಳೆಯರ ಇಚ್ಛೆಗೆ ವಿರುದ್ಧವಾಗಿ ಅವರ ಮೇಲೆ ಹೇರುತ್ತಿರುವ ಕಷ್ಟಕೋಟಲೆಗಳನ್ನು ಮರೆಮಾಚುತ್ತಿದ್ದಾರೆ, ಅಷ್ಟೆ.

ಇಲ್ಲಿ ಉನ್ನತ ಶೈಲಿಯ ಜೀವನವನ್ನು ನಡೆಸಲು ವ್ಯಭಿಚಾರ ನಡೆಸುವ ಕರೆವೆಣ್ಣುಗಳ ಬಗ್ಗೆ ನಾವು ಹೇಳುತ್ತಿಲ್ಲ. ಮಹಿಳೆಯರನ್ನು ಪುರುಷರಿಗಿಂತ ಕೀಳಾಗಿ ಕಾಣುವ ಮತ್ತು ಅವರು ಭೋಗದ ವಸ್ತು ಎಂದು ಪರಿಗಣಿಸುವ ಬಂಡವಾಳಶಾಹಿ ಸಮಾಜದಲ್ಲಿ ಸಾಮಾಜಿಕ ಅಧಃಪತನವಾಗುತ್ತಿರುವ ಉದಾಹರಣೆಗಳಿವೆ. ಈ ಸಮಾಜವು ಆರ್ಥಿಕ ಅಭಿವೃದ್ಧಿಯಲ್ಲಿ ಮತ್ತು ಸಾಮಾಜಿಕ ಮುನ್ನಡೆಯಲ್ಲಿ ಮಹಿಳೆಯರು ವಹಿಸಬಹುದಾದ ಮಹತ್ತರ ಪಾತ್ರಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.

ವೇಶ್ಯೆಯರನ್ನು ಲೈಂಗಿಕ ಕಾರ್ಯಕರ್ತರು ಎಂದು ಕರೆಯುವವರು ವೇಶ್ಯಾಗಿರಿಯನ್ನು ಕಾನೂನುಬದ್ಧ ಮಾಡುವುದು ಮತ್ತು ಸಮಾಜದಲ್ಲಿ ಮಹಿಳೆಯರ ಮೇಲೆ ಹೀನಾಯವಾಗಿ ಜೀವಿಸುವಂತಹ ಸ್ಥಿತಿಯನ್ನು ಶಾಶ್ವತವಾಗಿ ಹೇರುವುದನ್ನು ಸಮರ್ಥಿಸುತ್ತಾರೆ.

ಎಲ್ಲ ಮಹಿಳೆಯರಿಗೂ ನಿಜವಾದ ಅರ್ಥದಲ್ಲಿ ದುಡಿಯುವ ಹಕ್ಕನ್ನು ಮೂಲಭೂತ ಹಕ್ಕನ್ನಾಗಿ ಮಾಡಿ, ಸಾಮಾಜಿಕ ಸಮಾನತೆಯ ಭರವಸೆ ಇತ್ತರೆ, ನಮ್ಮ ಮಹಿಳೆಯರಿಗೆ ತಗುಲಿರುವ ಈ ಶಾಪಕ್ಕೆ ಇತಿಶ್ರೀ ಹೇಳುವುದು ಸಾಧ್ಯ. ವೇಶ್ಯಾಗಿರಿಯೆಂಬ ಸಾಮಾಜಿಕ ಕಳಂಕದ ವಿರುದ್ಧ ಹೋರಾಡಬೇಕೇ ಹೊರತು ಅವರ ಜೀವನವನ್ನು ವೈಭವೀಕರಿಸುವುದರಿಂದ ಅವರಿಗೇನೂ ಸಹಾಯವಾಗದು. ಇದಕ್ಕಾಗಿ ಅವರ ಜೀವನಕ್ಕೆ ಪುನಃಶ್ಚೇತನ ಕೊಡಬೇಕು; ಅವರು ತಮ್ಮ ಸೋದರರರೊಂದಿಗೆ ಗೌರವಯುತ ಜೀವನವನ್ನು ನಡೆಸಲು ಅನುಕೂಲವಾಗುವಂತೆ ಮರ್ಯಾದೆಯುತ ಜೀವನೋಪಾಯದ ನೆಲೆ ಒದಗಿಸಬೇಕು.

ಬಂಡವಾಳಶಾಹಿ ಸಮಾಜವು ಇದನ್ನು ಮಾಡಬಲ್ಲುದೇ ಎಂಬುದೇ ಇಂದು ಪರಿಣಗಣಿಸಬೇಕಾದ ಪ್ರಶ್ನೆ.

ಕನ್ನಡಕ್ಕೆ : ಹೆಚ್.ಎನ್. ಗೀತಾ

ಕೃಪೆ : ವಾಯ್ಸ್ ಆಫ್ ದಿ ವರ್ಕಿಂಗ್ ವುಮೆನ್

# ದಬ್ಬಾಳಿಕೆಯ ವಿರುದ್ಧ ದನಿ ಎತ್ತಿರುವ ವಿನಯಾ

- ಹೆಚ್. ಎಸ್. ಗೀತಾ

ಇದೀಗ ಮತ್ತೊಮ್ಮೆ ವಿನಯಾಳನ್ನು ಸೇವೆಯಿಂದ ವಜಾ ಮಾಡಲಾಗಿದೆ. ಮತ್ತೊಮ್ಮೆ ಎಂದು ಹೇಳಿರುವುದರಿಂದ ಈ ಹಿಂದೆಯೂ ಆಕೆಯನ್ನು ಸೇವೆಯಿಂದ ವಜಾ ಮಾಡಲಾಗಿತ್ತು ಎಂಬುದು ಸುಸ್ಪಷ್ಟ. ವಜಾ ಆಗಿದೆ ಎಂದರೆ ಆಕೆ ಏನೋ ಮಹತ್ತರವಾದ ತಪ್ಪನ್ನು ಎಸಗಿರಬೇಕು ಎಂದು ಒಡನೆಯೇ ಸಾಮಾನ್ಯವಾಗಿ ಎಲ್ಲರಗೂ ತೀರ್ಮಾನಕ್ಕೆ ಬರುತ್ತಾರೆ. ಆದರೆ ಅನ್ಯಾಯದ ವಿರುದ್ಧ ದನಿ ಎತ್ತುವುದು, ಕಿರುಕುಳವನ್ನು ಪ್ರತಿಭಟಿಸುವುದು, ಪಕ್ಷಪಾತ ಧೋರಣೆಯನ್ನು ವಿರೋಧಿಸುವುದು ತಪ್ಪು ಎಂದಾದರೆ, ಸರಿ ಎನ್ನುವುದು ಯಾವುದು?

ಪುರುಷ ಪ್ರಾಧಾನ್ಯ ಇಲಾಖೆಗಳ ಪೈಕಿ ಪೋಲೀಸ್ ಇಲಾಖೆಯದೇ ಪ್ರಾಯಶಃ ಮೇಲುಗೈ. ಈ ಇಲಾಖೆಯಲ್ಲಿ ಮಹಿಳೆಯರು ಕೆಲಸ ಮಾಡುವುದೇ ಕಡಿಮೆ. ಇಲ್ಲಿಗೆ ಸೇರಿದ್ದಾದ ಮೇಲೆ ಅವಮಾನಗಳನ್ನು ಸಹಿಸಬೇಕು. ಪ್ರತಿಭಟಿಸುತ್ತೇನೆ ಎಂದರೆ ವಿನಯಾಗೆ ಆದಂತೆಯೆ. ಮಹಿಳೆಯರು ಈ ಇಲಾಖೆಯಲ್ಲಿ ಕೆಲಸ ಮಾಡುವ ವಿಷಯ ಬಿಡಿ, ಯಾವುದೇ ಒಬ್ಬ ಭಾರತೀಯ ಮಹಿಳೆಗೆ ಒಂದು ಪೋಲಿಸ್ ಠಾಣೆಗೆ ಹೋಗಿ ದೂರು ಸಲ್ಲಿಸುವುದು ಎಂದರೆ ಏನೋ ಅಳುಕು - ಅಂಜಿಕೆ ಎನ್ನುವುದನ್ನು ಯಾರೂ ಅಲ್ಲಗಳೆಯಲಾರದು. ಇದೇ ಕಾರಣದಿಂದಾಗಿಯೇ ಮಹಿಳಾ ಪೋಲಿಸ್ ಠಾಣೆಗಳು ಹಾಗೂ ಪೋಲಿಸ್ ದಳದಲ್ಲಿ ಹೆಚ್ಚು ಹೆಚ್ಚು ಮಹಿಳೆಯರ ನೇಮಕಾತಿಗೆ ಒತ್ತು ನೀಡಲಾಗುತ್ತಿದೆ ಎಂಬುದು ಸತ್ಯ ಸಂಗತಿಯೇ. ಆದರೆ ಈ ದಳಕ್ಕೆ ಸೇರಿದ ಮಹಿಳೆಯರ ಬಗ್ಗೆ ಇಲಾಖೆಗೆ ಎಳ್ಳಷ್ಟೂ ನಿಷ್ಪಕ್ಷಪಾತ ಧೋರಣೆಯನ್ನು ಅನುಸರಿಸುವುದಿಲ್ಲ. ಐಪಿಎಸ್ ಅಧಿಕಾರಿಯೇ ಆಗಿರಲಿ, ಕಾನ್‌ಸ್ಟೇಬಲ್ಲೇ ಇರಲಿ - ಮಹಿಳೆಯಾಗಿದ್ದರೆ, ಪುರುಷ ದಬ್ಬಾಳಿಕೆಯನ್ನು ಸಹಿಸಲೇಬೇಕು. ತಮಗೆ ಸೆಲ್ಯೂಟ್ ಮಾಡಲು ತಮ್ಮ ಕೈಕೆಳಗಿನವರ ವಿರೋಧವಿದೆ ಎಂಬ ವಿಷಯವನ್ನು ಎಸ್‌ಪಿ ಹಾಗೂ ಡಿಜಿಪಿಗಳೂ ಸೇರಿದಂತೆ ಅನೇಕ ಐಪಿಎಸ್ ಅಧಿಕಾರಿಗಳೇ ಬಯಲು ಮಾಡಿದ್ದಾರೆ. ಆದರೆ, ಒಬ್ಬ ಮಹಿಳಾ ಸಬ್ ಇನ್‌ಸ್ಪೆಕ್ಟರ್ ತನ್ನ ಇಲಾಖೆಯ ವಾಹನದಲ್ಲಿ ಮುಂಭಾಗದಲ್ಲಿ ಸೀಟಿನಲ್ಲಿ ಚಾಲಕನ ಪಕ್ಕದಲ್ಲಿ ಕುಳಿತುಕೊಳ್ಳುವುದಿಲ್ಲ ಎಂಬ ಸುದ್ದಿಯನ್ನೂ ನಾವು ಈಗಾಗಲೇ ಕೇಳಿದ್ದೇವೆ. ಇದಕ್ಕೆ ಸಾಮಾಜಿಕ ಹಾಗೂ ಕುಟುಂಬದ ಒತ್ತಡವೇ ಕಾರಣ! ಕಾರಣವೇನೆಂದರೆ ಇಲಾಖೆ ತನ್ನ ಕಾರ್ಯ ವೈಖರಿಯಿಂದ ಗಳಿಸಿರುವ ಹೆಸರು.

ವಿನಯಾ ಕೇರಳದ ಮಹಿಳೆ. ಅಲ್ಲಿನ ವೈನಾಡ್ ಜಿಲ್ಲೆಯ ಮನಂತವಾಡಿ ಪೋಲಿಸ್ ಠಾಣೆಯಲ್ಲಿ ಕಾನ್‌ಸ್ಟೇಬಲ್ ಆಗಿ ನೌಕರಿ ನಿರ್ವಹಣೆ. ಮೇಲೆ ಹೇಳಿದಂತೆ ಈ ಇಲಾಖೆಯಲ್ಲಿ ಬಹಳಷ್ಟು ಮಂದಿ ಮಹಿಳೆಯರು ತಮಗಾಗುವ ಪಕ್ಷಪಾತವನ್ನು, ಕಿರುಕುಳವನ್ನು ಮೌನವಾಗಿ ಸಹಿಸುತ್ತಾರೆ. ಆದರೆ ವಿನಯಾ ಈ ಪೈಕಿ ಒಬ್ಬರಲ್ಲ; ವಿಷಯ ಸಣ್ಣದಿರಲಿ, ದೊಡ್ಡದಿರಲಿ - ಒಟ್ಟಿನಲ್ಲಿ ಪಕ್ಷಪಾತ ಧೋರಣೆಯ ವಿರುದ್ಧ ಯಾವುದೇ ಅಳುಕಿಲ್ಲದೆ ಹೋರಾಡಿದರು. ಮಹಿಳೆಯರಿಗೆ ಅಹಿತವೆನಿಸುವ ಸಮವಸ್ತ್ರ, ಪುರುಷ ಸಹೋದ್ಯೋಗಿಗಳ ಅನುಚಿತ ವರ್ತನೆ ಮುಂತಾದ ಅಂಶಗಳ ವಿರುದ್ಧ ದನಿ ಎತ್ತಿದರು. ಇವೆಲ್ಲ ಪ್ರಾಯಶಃ ಮೇಲಧಿಕಾರಿಗಳಿಗೆ ಸಹನವಾಗಲಿಲ್ಲ.

ಈ ಮಧ್ಯೆ ಎಂದಿನಂತೆ ಈ ಬಾರಿಯೂ ಕೇರಳದಲ್ಲಿ ಪೋಲಿಸರ ವಾರ್ಷಿಕ ಕ್ರೀಡಾ ಸಮ್ಮೇಳನ ನಡೆಯಿತು. ಎಲ್ಲ ಕ್ರೀಡಾ ವಿಭಾಗಗಳಲ್ಲಿಯೂ ಮಹಿಳೆಯರಿಗೇ ಒಂದು ಪ್ರತ್ಯೇಕ ವಿಭಾಗವಿದೆ. ಇಲ್ಲಿಯೂ ಇತ್ತು. ಆದರೆ ವಿಪರ್ಯಾಸವೇನೆಂದರೆ, ವಿಜಯ ಶಾಲಿ ಜಿಲ್ಲೆಯನ್ನು ನಿರ್ಧರಿಸುವಾಗ, ಮಹಿಳೆಯರು ಗಳಿಸಿರುವ ಪಾಯಿಂಟುಗಳನ್ನು ಗಣನೆಗೇ ತೆಗೆದುಕೊಳ್ಳುವುದಿಲ್ಲ. ಇದು ವಿನಯಾಗೆ ಒಂದು ರೀತಿಯಲ್ಲಿ ಆಘಾತವನ್ನೇ ಉಂಟುಮಾಡಿತು. ಆಟಕ್ಕುಂಟು, ಲೆಕ್ಕಕ್ಕಿಲ್ಲ! ಇದೇನಿದು? ಈ ಸಂದರ್ಭದಲ್ಲಿ ಈ ತೀರ್ಮಾನವು 'ಲಿಂಗಾಧಾರವೂ ಸೇರಿದಂತೆ ಎಲ್ಲ ರೀತಿಯ ಪಕ್ಷಪಾತಗಳಿಂದ ಮಹಿಳೆಯರಿಗೆ ರಕ್ಷಣೆ ಸಿಗುವುದೆಂದು ಭರವಸೆ ನೀಡುವ ಭಾರತೀಯ ರಾಜ್ಯ ಶಾಸನದ ಉಲ್ಲಂಘನೆ' ಎಂದು ವಿನಯಾ ಹೇಳಿದ್ದೂ ಸಹ ನ್ಯಾಯಬದ್ಧವೇ. ಇದೇ ವಿಷಯವಾಗಿ ವಿನಯಾರವರು ಕ್ರೀಡಾ ಸಮ್ಮೇಳನದ ಅಧಿಕಾರ ವಹಿಸಿಕೊಂಡಿದ್ದ ಉನ್ನತ ಅಧಿಕಾರಿಗಳನ್ನು ಇತರ ಕೆಲವು ಮಹಿಳೆಯರ ಜೊತೆಗೂಡಿ ಹೋಗಿ ಸಂಪರ್ಕಿಸಿ. ಆ ಅಧಿಕಾರಿಗಳೋ ಇವರ ಬೇಡಿಕೆಯನ್ನು ಒಪ್ಪಿಕೊಳ್ಳಲು ತಿರಸ್ಕರಿಸಿದ್ದೇ ಅಲ್ಲದೆ, ಈ

CPMG/KA/BG-8/2003-05 RNI No. 45577/88

*Posted at Basavanagudi P.O. On the 25th of every Month*

ಮಹಿಳೆಯರನ್ನು ಮೂದಲಿಸಿದರು. ವಿರೋಧಸೂಚಕವಾಗಿ ವಿನಯಾ ಟ್ರ್ಯಾಕ್ ಮೇಲೆಯೇ ಮಲಗಿದರು. ಆಕೆಯನ್ನು ಬಂಧಿಸಲಾಯಿತು - ನಂತರ ಸೇವೆಯಿಂದ ವಜಾ ಮಾಡಲಾಯಿತು. ಇವೆಲ್ಲ ಆಕೆಯನ್ನು ಮೊದಲ ಬಾರಿ ವಜಾ ಮಾಡಿದ ಪ್ರಸಂಗದ ಸಂಕ್ಷಿಪ್ತ ವಿವರಣೆ.

ಈ ಸಂದರ್ಭದಲ್ಲಿ ವಿನಯಾ ತನ್ನ ನಸೀಬನ್ನು ಹಳಿಯಲ್ಲಿಲ್ಲ, ಕೈ ಕಟ್ಟಿ ಕೂಡಲಿಲ್ಲ. ನೇರವಾಗಿ ಹಾಗೂ ದಿಟ್ಟತನದಿಂದ ಕೇರಳ ನ್ಯಾಯಾಲಯಕ್ಕೆ ದೂರು ಸಲ್ಲಿಸಿದರು. ಸರ್ಕಾರವು ವಿನಯಾರವನ್ನು ಮತ್ತೆ ಸೇವೆಯಲ್ಲಿ ಸ್ಥಾಪಿಸಬೇಕೆಂದು ನ್ಯಾಯಾಲಯವೂ ಆದೇಶ ನೀಡಿತು. ಮುಂದಿನ ಕ್ರೀಡಾ ಸಮ್ಮೇಳನದಿಂದ ಮಹಿಳೆಯರು ಗಳಿಸುವ ಪಾಯಿಂಟುಗಳನ್ನು ಸಹ ಪರಿಗಣಿಸಬೇಕೆಂದು ನ್ಯಾಯಾಲಯ ಇಲಾಖೆಗೆ ಹೇಳಿತು. ಜೊತೆಗೆ ವಿನಯಾರವರ ಬೇಡಿಕೆಗೆ ಅನುಗುಣವಾಗಿ ಮಹಿಳಾ ಪೋಲಿಸರ ಉಡುಪಿನ ವಿನ್ಯಾಸವನ್ನು ಸಹ ಬದಲಿಸಬೇಕೆಂಬ ಆದೇಶವನ್ನೂ ಸಹ ನೀಡಿತು. ಇಲಾಖೆಗೆ ನುಂಗಲಾರದ ತುತ್ತು!

11 ತಿಂಗಳು ಕಳೆದ ಮೇಲೆ, ಅಂದರೆ 2003ರ ಜೂನ್‌ನಲ್ಲಿ ವಿನಯಾ ತುಂಬಾ ವಿಶ್ವಾಸದಿಂದ ಮತ್ತೆ ಸೇವೆಗೆ ಮರಳಿದರು. ಆದರೆ ಆಕೆಯ ಮರುನೇಮಕಾತಿಗಾಗಿ 11 ದಿನಗಳಷ್ಟೇ ಆಗಿದ್ದಾಗ ಅಶಿಸ್ತು ಎಂಬ ಕಾರಣಕ್ಕಾಗಿ ಆಕೆಯನ್ನು ಡಿಜಿಪಿ ಮತ್ತೆ ವಜಾ ಆದೇಶ ನೀಡಿದ್ದಾರೆ. ವಾಸ್ತವದಲ್ಲಿ ಇಲಾಖೆಯ ಪ್ರಕಾರ ಅಶಿಸ್ತು ಎಂದರೇನು? ಅನ್ಯಾಯ - ಕಿರುಕುಳ - ಪಕ್ಷಪಾತಗಳ ವಿರುದ್ಧ ದನಿ ಎತ್ತುವುದರ ಹೆಸರೇ ಅಶಿಸ್ತೇ ಎಂಬ ಅನುಮಾನ ಬರತೊಡಗಿದೆ.

ವಜಾ ಆದೇಶವನ್ನು ರದ್ದು ಮಾಡಬೇಕೆಂದು ಎಲ್ಲ ಮಹಿಳಾ ಸಂಘಟನೆಗಳು ಹಾಗೂ ವಿರೋಧ ಪಕ್ಷಗಳು ಸರ್ಕಾರವನ್ನು ಒತ್ತಾಯಿಸಿವೆ. ಇಲಾಖೆಯ ಮುಖಾಂತರ, ಕಾನೂನುರೀತ್ಯಾ ಹಾಗೂ ಎಲ್ಲ ಮಹಿಳಾ ಸಂಸ್ಥೆಗಳ ಒಡಗೂಡಿ ವಿನಯಾ ಎಲ್ಲ ಹಂತಗಳಲ್ಲಿಯೂ ಹೋರಾಟ ಕೈಗೆತ್ತಿಕೊಂಡಿದ್ದಾರೆ. ಆಕೆ ತನ್ನ ಹೋರಾಟ ಮುಂದುವರಿಸಲಿ; ಈ ಹೋರಾಟದಲ್ಲಿ ಜಯ ಅವರದಾಗಲೀ ಎಂದೇ ನಮ್ಮ ಹಾರೈಕೆ.

★

"Achala" 108, Skyline Surabhi,
14 - P , Vidyapeeta Road,
BSK III Stage,
Bangalore - 560 085

To :

Smt/Sri